ಕಾದಂಬರೀ ಸಂಗ್ರಹ ಗ್ರಂಥಮಾಲಾ.

ಶ್ರೀರಾಮ ಭಕ್ತಾಗ್ರೇಸರ

# ಮಹಾತ್ಮಾ ಕಬೀರ್‌ದಾಸ್

ಗ್ರಂಥಕರ್ತ

ಅನಂತ

ಶ್ರೀರಾಮ ಪ್ರೆಸ್, ನಂಜನಗೂಡು.

1930

PRICE 4 ANNAS] [ಬೆಲೆ ೪ ಆಣೆ.

ಕಾದಂಬರೀ ಸಂಗ್ರಹ ಗ್ರಂಥಮಾಲಾ.

ಶ್ರೀರಾಮ ಭಕ್ತಾಗ್ರೇಸರ

# ಮಹಾತ್ಮಾ ಕಬೀರ್‌ದಾಸ್

ಗ್ರಂಥಕರ್ತ

ಅನಂತ


ಶ್ರೀರಾಮ ಪ್ರೆಸ್, ನಂಜನಗೂಡು

1930

Pric 4 Anna] [ಬೆಲೆ ೪ ಆಣೆ.

# FOREWORD.

The biography of Kabir Das will amply repay perusal. The fact that Kabir Das, though a Muhammadan, was a devotee of Sri Ramachandra, ought to teach the various communities warring on communal and religious questions that hatred based on caste or creed is against the dictates of the SUPREME BEING. Mr. Ananthapadmanabha Rao deserves praise for writing in readable Canarese the biography of such a great man, for the benefit of the Canarese speaking public. The poems are full of import and are easily understandable even by the layman. Mr. Ananthapadmanabha Rao though a beginner in the art deserves praise for his versatility.

Mercara }
Coorg. }

K. CHENGAPPA, B. A.
Rao Bahadur,
District Magistrate of Coorg.

# ಮುನ್ನುಡಿ.

ನೂತನವಾದ ಶಾಸ್ತ್ರೀಯ ಸಂಶೋಧನೆಗಳು ಹೆಚ್ಚುತ್ತಹೋದಂತೆ ಜಗತ್ತಿನಲ್ಲಿ ಜಡವಾದವು ಪ್ರಭಾವಶಾಲಿಯಾಗಹತ್ತುತ್ತವೆ. ನಿಜವಾಗಿ ನೋಡಿದರೆ ಶಾಸ್ತ್ರೀಯ ಸಂಶೋಧನೆಗಳಿಂದ ಆತ್ಮಜ್ಞಾನದ ಅಭಿವೃದ್ಧಿಯೇ ಆಗಬೇಕಾದುದು. ದೃಶ್ಯ ಸೃಷ್ಟಿಯೊಳಗಿನ ಭೌತಿಕ ಪದಾರ್ಥಗಳನ್ನು ಪೃಥಃಕರಿಸಲು ಪ್ರವರ್ತಿಸಿದ ಸಂಶೋಧಕರ ಮನಸ್ಸು ಕೊನೆಗೆ ಭೌತಿಕಪದಾರ್ಥ-ಜಾತಗಳ ಮೂಲದಲ್ಲಿರುವ ಚಿದ್ವಸ್ತುವಿನಲ್ಲಿ ವಿಶ್ರಾಂತಿ ಹೊಂದಬೇಕಾದುದು ನ್ಯಾಯವು. ಇದುವೆ ಸಂಶೋಧನಕ್ರಿಯೆಯ ವಿಕಾಸವು. ಆದರೆ ಆಧುನಿಕ ಸಂಶೋಧನೆಗೆ ಈ ವಿಕಸಿತ ಸ್ಥಿತಿಯು ಬರುವತನಕ ಜಡವಾದವೇ ಹಬ್ಬಿಕೊಂಡಿರುವುದು ಸಹಜವಾಗಿದೆ ಇಂತಹ ಪರಿಸ್ಥಿತಿಯಲ್ಲಿ ಭಕ್ತಿ, ಜ್ಞಾನ, ಮೊದಲಾದ ಆತ್ಮಪ್ರಾಪ್ತಿಯ ಸಾಧನೆಗಳು ಲುಪ್ತವಾಗಿ ನಾಸ್ತಿಕ್ಯವೇ ಎಲ್ಲೆಲ್ಲೂ ತಲೆ ಎತ್ತುವುದು ಅಸ್ವಾಭಾವಿಕವೆಂದು ಯಾರು ಹೇಳುವಂತಿದೆ! ಆದರೆ ಉಷ್ಣತೆಯು ಅತ್ಯಧಿಕಕೋಟಿಯನ್ನು ಹೊಂದಿದಾಗ ಪ್ರಕೃತಿಯು ಮಳೆಯನ್ನು ಕಳುಹಿಸಿ ಅದರ ನಿವಾರಣೆಯನ್ನು ಹೇಗೆ ಮಾಡುವದೋ ಹಾಗೆಯೇ ಭೌತಿಕ ವಾದದಿಂದ ನಾಸ್ತಿಕ್ಯವು ಪ್ರಬಲವಾದಾಗ ಸಾಧುಪುರುಷರು ಬಂದು ತಮ್ಮ ಉಪದೇಶಾಮೃತದಿಂದ ನಾಸ್ತಿಕ್ಯವನ್ನು ಪರಿಹರಿಸುತ್ತಾರೆ. ಈ ರೀತಿಯಿಂದ ಅವತರಿಸಿದ ಸತ್ಪುರುಷರಲ್ಲಿ ಕಬೀರದಾಸರೆಂಬುವರು ಒಬ್ಬರಾಗಿದ್ದಾರೆ. ಇವರು ಉತ್ತರ ಹಿಂದೂಸ್ಥಾನದಲ್ಲಿ ಜನಿಸಿ ತಮ್ಮ ಸದುಪದೇಶದಿಂದ ಅಲ್ಲಿಯ ಜನರನ್ನು ಉದ್ಧರಿಸಿರುವರು. ಮತ್ತು ತಮ್ಮ ಭಕ್ತಿಪ್ರಣಯನಾದ ಚಿತ್ತವೃತ್ತಿಯಿಂದ ಅಲೆಯುವರಿಗೆ ಉದಾಹರಣೆಯು ವಾಗಿದ್ದರು. ಈ ಮಹಾತ್ಮರನ್ನು ಕುರಿತು ಬರೆಯುವಾಗ ಇನ್ನೊಂದು ವಿಶೇಷವಾದ ಸಂಗತಿಯನ್ನು ಉಲ್ಲೇಖಿಸಬೇಕಾದುದೇನೆಂದರೆ,—ಅವರು ಜನ್ಮದಿಂದ ಮಹಮ್ಮದೀಯರಾದರೂ ಶ್ರೀರಾಮಚಂದ್ರನ ಪರಮ ಭಕ್ತರಾಗಿದ್ದರು. ಇವರ ಚರಿತ್ರೆಯು ಉತ್ತರ ಪ್ರದೇಶದಲ್ಲಿ ಸುಪ್ರಸಿದ್ಧವಾಗಿದೆ.

ಇಂತಹ ಮಹಾಭಕ್ತರ ಆದರಣೀಯವಾದ ಚರಿತ್ರೆಯನ್ನು ಶ್ರೀಯುತ M. S. ಅನಂತಪದ್ಮನಾಭರಾಯರವರು ಪದ್ಯರೂಪದಿಂದ ಕನ್ನಡಿಸಿ ಕನ್ನಡಿಗರ ಮೇಲೆ ಮಹದುಪಕಾರವನ್ನು ಮಾಡಿರುವರೆಂದು ಹೇಳಿದರೆ ಅದು ಅತಿಶಯೋಕ್ತಿ ಯಾಗಲಿಕ್ಕಿಲ್ಲ. ಶ್ರೀಯುತ ಅನಂತಪದ್ಮನಾಭರಾಯರ ಪದ್ಯಮಯವಾಣಿಯು ರಸ ಪರಿಪ್ಲುತವಾಗಿದ್ದು ಪ್ರಾಸಾದಿಕವಾಗಿದೆ. ಇವರು ಕೆಲವು ಆಧುನಿಕ ಕವಿಗಳಂತೆ ಪ್ರಾಸವನ್ನು ಅನಾದರಿಸದೆ ಪೂರ್ವಕವಿಗಳಂತೆ ತಮ್ಮ ಪದ್ಯಗಳನ್ನು ಸುಪ್ರಾಸಗಳಿಂದ ಅಲಂಕರಿಸಿರುವರು. ಇದು ತುಂಬಾ ಸಂತೋಷದ ಮಾತಾಗಿದೆ. ಇಷ್ಟೇ ಅಲ್ಲ, ಇವರ ರಚನಾಶೈಲಿಯು ಪ್ರಾಚೀನ ಕಾವ್ಯಸರಣಿಯನ್ನು ಹೋಲುವಂತಿದೆ. ಈ ಕಾವ್ಯ ದಲ್ಲಿರುವ ಇನ್ನೊಂದು ವಿಶೇಷವೇನೆಂದರೆ, ಕ್ಲಿಷ್ಟಕಲ್ಪನೆ ಅಸ್ವಾಭಾವಿಕ ವರ್ಣನೆ, ದೀರ್ಘಸಮಾಸ, ಅಪ್ರಸಿದ್ಧ ಪದಪ್ರಯೋಗ ಇತ್ಯಾದಿ ಕೆಲವು ಹಳೇ ಕಾವ್ಯದಲ್ಲಿ ಕಾಣಬಹುದಾದ ದೋಷಗಳೇನೂ ಇದರಲ್ಲಿರದೆ ಬಹು ಸುಲಭವಾದ ಶೈಲಿಯಲ್ಲಿ ಈ ಪದ್ಯಗಳು ಬರೆಯಲ್ಪಟ್ಟಿವೆ. ಮೊದಲೇ ಕಬೀರನಂತಹ ಸಾಧುಗಳ ಚರಿತ್ರೆ; ಅದ ರಲ್ಲೂ ಭಕ್ತಿಯಂತಹ ಹೃದಯಂಗಮರಸ; ಇವೆರಡೂ ನಮ್ಮ ಶ್ರೀ || ಅನಂತ ಪದ್ಮನಾಭರಾಯರ ಪ್ರತಿಭಾಶಕ್ತಿಯನ್ನು ಸರಸವಾದ ಕವಿತಾನದಿಯ ರೂಪದಿಂದ ಹೊರಹೊರಡಿಸಿವೆ. ಆದುದರಿಂದ ಈ ಕಾವ್ಯವು ಸಾಮಾನ್ಯರಿಗೆ ಬೋಧಪ್ರದವಾಗು ವಂತೆಯೇ ವಿದ್ವಾಂಸರಿಗೂ ಮನೋರಂಜಕವಾಗದೆ ಇರಲಿಕ್ಕಿಲ್ಲವೆಂದು ನಂಬಿರುವೆವು.

ನೂತನಕವಿಗಳ ಈ ಸತ್ಕೃತಿಯನ್ನು ಕನ್ನಡಿಗರು ಆದರಿಸಿ ಇನ್ನು ಮುಂದೆ ಇದೇತರದ ಕಾವ್ಯಗಳನ್ನು ರಚಿಸಲು ಅವರಿಗೆ ಪ್ರೋತ್ಸಾಹವನ್ನೀಯುವರೆಂದು ಭರವಸೆ ಪಟ್ಟಿದ್ದೇವೆ.

Central High Sehool,
MERCARA.
15—7—29

ಆತ್ಮಾರಾಮಶಾಸ್ತ್ರೀ ಪಿಡ್ಲೆವಾನೆ
ವಿದ್ಯಾವಾಚಸ್ಪತಿ.

# ಶುದ್ಧಾಶುದ್ಧ ಪತ್ರಿಕೆ.

| ಪು. | ಪ. | ಪಂ. | ಅಶುದ್ಧ. | ಶುದ್ಧ. |
|---|---|---|---|---|
| 1 | ೧ | ೬ | ವಿಠಲ | ವಿಠ್ಠಲ |
| 2 | ೫ | ೩ | ರುಕ್ಕ್ಮಿಣಿ ರಮಣಿ | ರುಕ್ಮಿಣಿ ರಮಣ |
| ,, | ,, | ೬ | ಕಲ್ಯಾಣಿ | ಕಲ್ಯಾಣ |
| 3 | ೧೧ | ೬ | ಮೋಕ್ಷವದೊಂದ | ಮೋಕ್ಷವನೊಂದ |
| 4 | ೩೦ | ೩ | ಜನಕ್ಕೆ | ಜನಕೆ |
| 5 | ೬ | ೪ | ಮಾಡಿತು | ಮಾಡಿತು |
| ,, | ೯ | ೧ | ಎಂದು | ಎಂದ |
| 7 | ೧೪ | ೧ | ಕಮಾಲ | ಕಮಾಲ |
| 10 | ೨೮ | ೬ | ರಾಯು | ರಾಮು |
| ,, | ೩೧ | ೪ | ಅವ | ಅವ |
| 14 | ೪೬ | ೪ | ಮಂದರಾದ್ರ್ಯಯಮೇಲೆ | ಮಂದರಾದ್ರಿಯ ಮೇಲೆ |
| 19 | ೨೧ | ೨ | ಜಯಾಂತಕ | ಜಯಾಂತಃ |
| 22 | ೬ | ೩ | ಪಾರಿತೋಹಕ | ಪಾರಿತೋಷಕ |
| 25 | ೧೯ | ೩ | ದೊಡೆ | ದೊಡೆ |
| . | ೨೨ | ೨ | ಕೃತ್ಯಕ್ಕೆ | ಕೃತ್ಯಕೆ |
| 33 | ೫೩ | ೨ | ಸೋಳು | ಸೋಳು |
| 36 | ೬೯ | ೫ | ದಾಯು | ಕಾಯು |
| 39 | ೩೦ | ೩ | ಗೆಲದ | ಗೆಲಿದ |
| 40 | ೭ | ೩ | ನಿದು | ನಿವ |
| 40 | ೮ | ೨ | ಅಹಿ | ಅಹಿ |
| 44 | ೨೮ | ೬ | ಬೇಳುಯೋಗಿ | ಬೇಳು ಎನ್ನಲು ಯೋಗಿ |
| 49 | ೪೩ | ೩ | ಯತಿಯುವರ | ಯತಿವರ |
| ,, | ,, | ೬ | ಶರಣಿ | ಶರಣು |
| ,, | ೪೪ | ೪ | ನಾಸಿನ್ನು | ನಾಸಿನ್ನ |
| 51 | ೨ | ೩ | ತೊದಲಲಿಯು | ತೊದಲುಲಿಯು |
| ,, | ,, | ೫ | ಸಂಕಿಂತರ್ನೆ | ಸಂಕೀರ್ತನೆ |

| | | | | |
|---|---|---|---|---|
| 52 | ೮ | ೨ | ಕಣಿಯುಂಕಲಿ | ಕೇಣಿಯುಂಕಳಿ |
| ,, | ೯ | ೧ | ಗ್ನೆಯುಂಕ | ಗ್ನೆಯುಂವ |
| 53 | ೯ | ೨ | ನೆಂದು | ವೆಂದು |
| 54 | ೧೮ | ೧ | ನುತಿಯೆ | ನುಡಿಯೆ |
| 56 | ೨೨ | ೬ | ಜನವ | ಡವನ |
| 57 | ೨೧ | ೨ | ಭನ್ನ | ಅನ್ನ |
| 59 | ೪೦ | ೨ | ಸಿತ | ಪಿತ |
| 61 | ೪೬ | ೬ | ಗೆಂದ | ಗೆಂಗ |
| 65 | ೬೫ | ೩ | ರಾವೋತ್ಸವ | ರಾವೋತ್ಸವವ |
| ,, | ,, | ೪ | ಅನಥ | ಅನಘ |
| 66 | ೬೯ | ೬ | ಗಿತು | ಗಿತ |
| 68 | ೭೭ | ೬ | ಸತತ | ಸಂತತ |
| 70 | ೮ | ೨ | ಶರೀ | ಶರಂ |
| 73 | ೧೯ | ೧ | ಕಾಯ್ದು | ಕಾಯ್ದು |
| ,, | ,, | ೨ | ಮಾನಿನೀಯುನ | ವಾನಿನೀಯುಳ |
| ,, | ೩೧ | ೪ | ಹಿತವಗೆ | ಹಿತವನೆ |
| 76 | ೨೨ | ೬ | ಧವಲಸು | ಫನವನು |
| ,, | ,, | ೫ | ಸಿರಿಯುನು | ಸಿರಿಯು |
| ,, | ೨೪ | ೨ | ಉತ್ತಮಾಂಗದರಾಜಧೂತಗೆ | ಉತ್ತಮಾಂಗನೆ ರಾಜದೂತನ |
| 77 | ೨೮ | ೩ | ನಿಂತು | ಗಿಂದು |
| ,, | ೨೯ | ೬ | ಕರುಡು | ಕರೆದು |
| 78 | ೪೨ | ೨ | ಹೇಳ್ಕೆ | ಹೇಳಲಿ |
| ,, | ,, | ,, | ಬೇರೆಯುವರೆಲ್ಲಿ | ಬೇರೆಯುವರೆಲ್ಲ |
| ,, | ೪೪ | ೨ | ವೇಷದ | ವೇಷದ |
| 79 | ೪೫ | ೨ | ನೊಂದೆಯಾ | ನೊಂದೆಯೊ |
| ,, | ೪೭ | ೬ | ಬಾರೋ | ಬಾರೊ |
| ,, | ೪೮ | ೬ | ಕೊಟ್ಟರೋ | ಕೊಟ್ಟರೊ |



ಶ್ರೀ ವಿಘ್ನೇಶಾಯನಮಃ

|| ಶ್ರೀ ರಾಮಚಂದ್ರ ಪರಬ್ರಹ್ಮಣೇಯನಮಃ ||

ಶ್ರೀರಾಮ ಭಕ್ತಾಗ್ರೇಸರ

# ಮಹಾತ್ಮಾ ಕಬೀರದಾಸ್.



## ಪೀಠಿಕಾ ಸಂಧಿ

ಶ್ರೀರಮಣ ಸೀತಾಮನೋಹರ ।
ಕಾರಣಾತ್ಮಕ ಸರ್ವವ್ಯಾಪಕ ।
ಸಾರಗುಣ ಗಂಭೀರ ನಿಗಮೋದ್ಧಾರ ರಘುವೀರ ॥
ಭೂರಿವಿಶ್ವಾಧಾರ ಬಹುದಾ ।
ಕಾರ ನಿರ್ಗುಣರೂಪ ಪಾದಾ ।
ವಾರ ಸಿರಿರಘುರಾಮವಿಠ್ಠಲ ಪೊರೆಗೆ ಸಜ್ಜನರ ॥೧॥

ಕಾರ್ಯಕಾರಣಕರ್ತ ಧೀರಾ ।
ವಾರ್ಯ ಗುಣಗಂಭೀರ ನಿಗಮೋ ।
ದ್ಧಾರ ಕರುಣಾಸಾರ ಬಿಡಿಸುನಿಕಾರ ಮಮಕಾರ ।
ಕ್ಷೀರವಾರಿಧಿಗೊಡೆಯ ನೀಲಾ ।
ಕಾರ ನಿರುಪಮರೂಪ ಘನಪರಿ ।
ಪೂರಣಾತ್ಮವಿಧಾತ ಲಕ್ಷ್ಮೀಲೋಲ ಪಾಲಿಸುಗೆ ॥೨॥

ಸಕಲ ಸುಖವಂ ತೊರೆದು ಹಿಮಕರ ।
ಶಿಖರಮೊಳು ಸತಿಸಹಿತ ನೆಲಸಿಹ ।
ನಖಿಳ ಸುರವರ ನಮಿತ ಗೌರೀಪ್ರೇಮನಿಧಿನಿಲಯ ॥
ನಿಖಿಳನಿಗಮಸ್ತುತ್ಯ ದಕ್ಷನ ।
ಮುಖವ ಭಂಗಿಸಿ ಕಾಯಿರುದ್ರನ ।
ಮುಖವ ತೋರಿದ ಶ್ರೀಮಹೇಶ್ವರ ಪಾಲಿಸುಗೆ ಜಗವ ॥೩॥

ನಿತ್ಯ ನಿಗಮಸ್ತುತ್ಯ ಗಜಮುಖ ।
ಸತ್ಯಧಿಕ ಗುಣಪೂರ್ಣ ಭವಹರ ।
ಸುತ್ತಲಿಹ ವಿಘ್ನಗಳ ಪರಿಹರಿಸುತ್ತ ಮಂಗಳವ ॥
ಇತ್ತು ಸುಲಲಿತಮಾಗಿ ಕೃತಿಯನು ।
ಬಿತ್ತರಿಸೆ ಸನ್ಮತಿಯ ನೀಯುತ ।
ಉತ್ತಮಾಂಗನೆ ಪೇಳಿಸೆನ್ನಯ ರಸನೆಯೊಳು ಭರದಿ ॥೪॥

ಶರಧಿಸುತೆ ಸುರವಿನುತೆ ಶ್ರೀರಮೆ ।
ಸರಸಿಜೋದ್ಭವಮಾತೆ ಜಾನಕಿ ।
ಹರಿಪದೋದಕಧಾರಿ ರುಕ್ಮಿಣಿ ರಮಣಿ ಶಶಿವದನೆ ॥
ಹರಿಣಲೋಚನೆ ಲಕ್ಷ್ಮಿ ಸಿರಿವಧು ।
ಕರುಣಮಾನಸೆ ವನಜಪಾಣಿಯೆ ।
ಪರಮ ಮುದದೊಳು ನೀಡು ಸಂಪದ ಜಗಕೆ ಕಲ್ಯಾಣಿ ॥೫॥

ಕಮಲಭವಸತಿ ಶ್ರೀಸರಸ್ವತಿ ।
ವಿಮಲಗುಣ ಪರಿಪೂರ್ಣೆ ಶಶಿಮುಖಿ ।
ಸುಮಸಹೋದರಕುವರಿ ಸನ್ಮತಿ ನೀಡು ಮುದದಿಂದ ॥
ಅಮಿತ ವಿದ್ಯವನಿತ್ತು ಜಗದೊಳು ।
ಕುಮತಿಬಿಡಿಸೌ ತಾಯೆ ಸರಸತಿ ।
ನಮಿಸೆ ನಿನ್ನಯ ಪಾದಪದ್ಮಕೆ ಶರಣುಶರಣೆಂದು ॥೬॥

ಗೋವುಗಳ ಕಾಯ್ದವನ ಗೋಪೀ ।
ಗೋವಳರ ರಮಿಸಿದನ ಕೃಷ್ಣನ ।
ಹಾವಭಾವವಿಲಾಸಗಳ್ಳನ ಭಜಕ ಯತಿವರನ ॥
ಆವ ವಿದ್ಯಾಶರಧಿತೀರ್ಥನ ।
ಶ್ರೀವಿವತಿಶಯದಿಂದ ನಮಿಸುವೆ ।
ಭಾವಿಸುತ ಲನವರತ ಗುರುವರನಂಘ್ರಿಗಳ ಮನದಿ ॥೭॥

ಕೃಷ್ಣಚರಿತಾಮೃತವ ಸೊರೆದಿಹ ।
ವೈಷ್ಣವಾಗ್ರಣಿ ದೇವನಗರಿ ।
ಶ್ರೀಷ್ಠವಾಸನ ಚರಣಭಕ್ತನ ವರದ ಲಕ್ಷ್ಮೀಶ ॥

ಕೃಷ್ಣರಾಯನು ಗೈದ ಕಾರ್ಯವ ।
ನಷ್ಟು ಪೇಳ್ದ ಕುಮಾರವ್ಯಾಸನ ।
ಇಷ್ಟ ಪದಯುಗಕಾನು ನಮಿಪೆನು ಪರಮಪ್ರೀತಿಯೊಳು ॥೮॥

ನಿಗಮಕರ್ತನ ಉದರಕಮಲದೊ ।
ಳೊಗೆದ ಶುಕಮೌನೀಶ ಸಲೆ ಕಲಿ ।
ಯುಗದಿ ಕವಿವೀರನೆನಿಸುತ ಭಾರತದಿ ಜನಿಸಿವನು ।
ಜಗವು ಮಾಯಾಮಯದಿ ಮುಳುಗಿರೆ ।
ಒಗುವ ಶ್ರೀರಘುರಾಮ ಮಹಿಮೆಯ ।
ಜಗದಿ ಪಸರಿಸಿ ರಾಮಕೀರ್ತನಮಾಡಿ ನಲಿಸಿದ ॥೯॥

ಬೆರೆತು ಸಂಸಾರದಲಿ ಕಬಿರನು ।
ಕೊರಗಿ ಬಡತನದಿಂದ ಬಳಲುತ ।
ಸೊರಗಿ ಕುಜನರು ಹಾಸ್ಯಗೈಯಲು ಬಿಡದೆ ರಘುವರನ ॥
ಚರಣಯುಗಮೊಳು ಬಿದ್ದು ಹೊರಳುತ ।
ಹರಿಯಭಕ್ತರ ಸೇವೆಮಾಡುತ ।
ಪರಮಮೋಕ್ಷವಪಡೆಗ ಕರುಣಾವನಧಿ ಕಸಿಪೀರ ॥೧೦॥

ಪರಮಪಾವನನಾದ ಕಬಿರನು ।
ಸರಸಮಾರ್ಗವ ತೋರಿಕೊಟ್ಟನು ।
ಹರಿಯ ಚರಣದಿ ಭಕುತಿಯಿರಿಸಲು ಭರತದೇಶಕ್ಕೆ ॥
ಪರಮಪಾವನನಂಘ್ರಿಕಮಲವ ।
ಸ್ಮರಿಸಿ ಭಕುತಿಪ್ರೇಮ್ಮೈಯೆಯನ್ನರೆ ।
ಭರದಿ ಮೋಕ್ಷವಕೊಂದಲೋಸುಗ ಕೇಳ್ವುದಿದ ನೊಲಿದು ॥೧೧॥

ಭರದಿ ಬಾಲಸಮಾಜ ಸಭ್ಯರು ।
ವರಕಬೀರನ ಚರಿತೆಯನ್ನರೆ ।
ಬರೆಯೆನಲು ನಲವಿಂದ ನುಡಿದ ನಸಂತಸಿಂ ಕೃತಿಯ ॥
ಸರಸ ಕನ್ನಡನುಡಿಯಲೊರೆದನು ।
ಪರಮಭಕ್ತನ ನಿಜಯಶವನು ಮಿಗೆ ।
ಕರುಣದಿಂದಾಲಿಪುದು ಸುಜನರು ದೋಷ ತೊರೆಯುತಲಿ ॥೧೨॥

॥ ಮಂಗಳಮಸ್ತು ॥

## ಒಂದನೆಯ ಸಂಧಿ.

ಸೂ|| ಜನಿಸಿದನು ಶುಕಮೌನಿ ಜಗದಲಿ |
ವಿನುತ ರಾಮಾಮೃತವ ನೀಡುತ |
ಜನಕ್ಕೆ ಮಹದಾಶ್ಚರ್ಯವನು ತೋರಿದನು ಕವಿವೀರ ||

ಜನಿಸಿ ಶಂಕರ ಮಧ್ವ ವಲ್ಲಭ |
ವಿನುತ ರಾಮಾನುಜರು ಬೋಧಿಸಿ |
ಜನಕೆ ದ್ವೈತಾದ್ವೈತ ಮತಗಳ ವಿವಿಧಕಾಲದಲಿ ||
ಅನಘ ಮತಗಳ ಪಸರಿಸುತ್ತಲಿ |
ಜನಕೆ ಪೇಳುತ ಮೋಕ್ಷಪದವಿಗೆ |
ಪ್ರಣವಮಾರ್ಗವ ತತ್ವರೀತಿಯ ಪಡೆದು ಬೋಧಿಸುತ ||೧||

ಪಿಂತೆ ಕಳೆಯಲು ಕಾಲಧರ್ಮವು |
ಚಿಂತೆ ತೊರೆದರು ಹರಿಯ ಭಜನೆಯ |
ಸಂತಕಾಲವು ವಿವಿಧ ತೋಷದಿ ಮಗ್ನರಾಗುತಲಿ ||
ಇಂತು ತುಂಬಿತು ಜಾತಿಮತ ದ |
ಪಿಂತು ಜಗದೊಳು ವಿವಿಧ ಪೈವವು |
ಬಂತು ತುಂಬುತ ದುಷ್ಟಕೂಟವು ಜಗದೊಳೆಲ್ಲೆಲ್ಲೂ ||೨||

ಮರೆತುಹೋದರು ಭಕ್ತಿಮಾರ್ಗವ |
ಸರಿದುಹೋದುದು ಸತ್ಯವಾಕ್ಯವು |
ಹರಿದುಹೋಯಿತು ಧರ್ಮಸೂತ್ರವು ಭರತಭೂಮಿಯುಲಿ ||
ಬರಿದೆ ಸಂತರ ಹಾಸಿಯಾದುದು |
ಹರಿಯ ಭಕತರ ಹಿಂಸೆಯಾಗಲು |
ಪರಮ ಯೋಗೀಜನರು ಸಾರ್ದರು ರಾಮಸನ್ನಿಧಿಗೆ ||೩||

ಕಮಲನಾಭನ ಪದವನೊಲ್ಲುತ |
ಕುಮತಿತನದಲಿ ಜಗದ ಜನಗಳು |
ವಿಮಲಭಕತರ ಹಾಸಿಗೊಳಿಸುವ ಹೆದನ ನಡುಕಿದರು ||
ಕಮಲಲೋಚನ ಸಿಸ್ಕಸಗ್ರಗೆ |
ಪ್ರೇಮದಿಂದಲಿ ಸಿಸ್ಕ ರೂಪನು |
ಮಮತೆಯಿಂದಲಿ ನೋಡುತಿರ್ದವು ನಾವ ಹಗಲಿರುಳು ||೪||

ಇದುವೆ ನಮ್ಮಯ ಪೂರ್ವಪುಣ್ಯವು |
ವಿದಿತ ನಿನ್ನಯ ಕೃಪೆಯ ಮಹಿಮೆಯು |
ಚದುರ ನಿನ್ನನು ಕೀರ್ತಿಸುತ್ತಿಹುದೊಂದು ಭಾಗ್ಯವಲ ||
ಇದುವೆ ನಮ್ಮಯ ಸಕಲ ಸಂಪದ |
ಇದನೆ ಕರುಣಿಸು ಸಾರ್ವಕಾಲವು |
ಸದುಮನಾಥನೆ ನಿನ್ನ ಸೇವೆಯು ನಮಗೆ ಕರುಣಿಪುದು ||೫||

ಸಾಧುಸಜ್ಜನಭರಿತ ಭಾರತ |
ಸಾಧು ಸಂತರ ಸಿಂಗಿ ಕಳೆದುದು |
ಬೋಧಿಸಲು ಹರಿಭಕತರೆಲ್ಲರು ದಿಕ್ಕುಗೆಟ್ಟಹರು ||
ಭೇದವಳಿದಿತು ಶೌರ್ಯವಡಗಿತು |
ಮೋದದೊಳು ಹರಿಭಜನೆಯಡಗಿತು |
ಸಾಧುಗಳು ಸಲೆ ಮರಸಿಕೊಂಡರು ಭರತಭೂಮಿಯಲಿ ||೬||

ಸಂತರಿಲ್ಲದಬಳಿಕ ಧರಣಿಯು |
ಸಂತದುರುಳರ ಸೆರೆಗೆ ಸಿಲುಕಿತು |
ಅಂತರಾತುಮ ನಿನ್ನ ಜಾನಿಪ ಸಿಖಿಳಜನಸಿಕರ |
ಇಂತು ಕಷ್ಟವಗೊಂಡು ದುಃಖಿಸೆ |
ಎಂತುಸಹಿಪೆವು ನೋಡಿ ಭಕತರ |
ಚಿಂತೆ ಬಿಡಿಸ್ಕಿ ತಂದೆ ಬೇಗದಿ ಕೊಡುತ ಸುಮತಿಯನು ||೭||

ನಳಿನನಾಭನೆ ನೀಲಪಾವನ |
ಕಳೆಯಿ ಭುವಿಯೊಳು ನಾಸ್ತಿಕತ್ವನ |
ಪ್ರೊಳೆನ ಭಕುತಿಯರಸವ ನೀಡಲು ತೋರು ಮಾರ್ಗವನು ||
ಲಲಿತರೂಪನೆ ನಿನ್ನ ಕೀರ್ತನ |
ಜಲಧಿಯೊಳಗುಲಿ ತೇಲಿಸುತ್ತಲಿ |
ಕಳೆದುಮುರಿತವ ಸಲಹು ಕುಜನರ ದಹಿಸಿ ನಾಸ್ತಿಕರ ||೮||

ಎಂದು ಮಾತನು ಕೇಳಿ ಸಿರಿಪತಿ |
ಮುಂಪಭಾಗ್ಯರ ನೀತಿಪಡಪೊಳು |
ತಂದು ನಿಲಿಪುದು ಸಿನು, ಹಗನನ, ತೆಗೆದು ನಾಸ್ತಿಕನ ||

ಬಂದು ಕೊಡುವೆನು ನಾನು ಬೆಂಬಲ |
ಮಂದಮತಿಗಳ ನೀತಿಮಾರ್ಗಕೆ |
ತಂದು ಭಕುತಿಯರಸವ ಕುಡಿಸಿರಿ ನೀವು ನಿಮಗೆದುರೆ ||೯||

ನಿರುತ ಭಕ್ತರನಿಕರ ಮಧ್ಯದೊ |
ಳಿರುತ ನಲಿವುದು ನನಗೆ ಸಂತಸ |
ಪರಮಸಂತರ ಸಾಧುಸನ್ನಿಧಿ ಎನಗೆ ವೈಕುಂಠ ||
ಬರುವೆ ನೆನೆದೊಡೆ ನಿಮ್ಮ ಠಾವಿಗೆ |
ಧರಣಿನರರನು ಭಕ್ತಕೋಟಿಗೆ |
ತರುವ ಕಜ್ಜವನಿನಗೆ ವಹಿಸಿಹೆನೆಂದನಾ ಹರಿಯು ||೧೦||

ರಾಮಭಜಕರ ಪ್ರೇಮ ಪೆರ್ಚಿಸಿ |
ಕುಮತಿಜನರನುಪಾಯದಿಂದಲಿ |
ರಾಮನಾಮದಿ ಕಾಮಗೊಳಿಸುತ ಭಕುತಿಮಾರ್ಗದೊಳು ||
ಪ್ರೇಮಿ ಉದ್ಧವ ಶುಕರು ಭಾರತ |
ಭೂಮಿಯಲ್ಲುರೆ ಜನಿಸಿಬಂದರು |
ನಾಮದೇವ ಕಬೀರನಾಮದೊಳಖಿಳಜಗ ನಲಿಸೆ ||೧೧||

ಹರಿಯು [illegible] ಕೇಳಿ ಮುನಿಜನ |
ಪರಮ ಹರುಷವನಾಂತು [illegible]ತಿಸುತ |
ತೆರಳಿಪೋದರು ತಮ್ಮ ಕಾರ್ಯಕೆ ಭರದಿ ಕೀರ್ತಿಸುತ ||
ಹರಿಯನೇ ಚಿಂತಿಸುತ ಮನದಲಿ |
ಹರಿಯನೇ ಚಿತ್ರಿಸುತ ಹೃದಯದಿ |
ಹರಿಯ ರೂಪವಕಂಡು ಒಗ್ಗುತ ನಲಿದರವರಂದು ||೧೨||

ತಿರುವ [illegible] ಶುಕಮುನಿ |
ಎಸೆವ ಶುಕ್ತಿಯೊಳಡಗಿ ಜಠರದೊಳು |
ಸಸಿನೆ ಭಾಗೀರಥಿಯೊಳಿರ್ದನು ಸುಖದಿ ಮುನಿವರ್ಯ ||
ಬಿಸಜನಾಭನ ರಾಮಮಂತ್ರವ |
ಹಸಿತವದನದಿ ಜಪಿಸುತಿರ್ದನು |
ಮಿಸುಪ ಶಿಶುವಿನ ರೂಪದಿಂದಲಿ ಭಕ್ತಿಪರವಶದಿ ||೧೩||

ಮುಸಲಮಾನ ಕಮಾಲಮಿಾನನು ।
ಮಿಸುಪ ನೆಯ್ಗೆಯ ಕೆಲಸಮಾಡುತ ।
ಸಸಿನೆ ನೀಮಾಬೀಬಿಯೊಡನಿರುತಿರ್ದ ಕಾಶಿಯೊಳು ॥
ಕುಸುಮಲೋಚನ ಸುತನ ಪಡೆಯಲು ।
ಸಿಶಿದಿನದಿ ದೇವರಸು ನುತಿಸುತ ।
ಘಾಸಿಯಾದನು ಕುವರರಿಲ್ಲದೆ ತಮುಲ ಬೇಸರದಿ ॥೧೪॥

ಮ್ಲೇಚ್ಛತಮಲನು ನೂಲ ತೊಳೆಯುವ ।
ದಿಚೆ ಯಿಂದಲಿ ಬಂದನಲ್ಲಿಗೆ ।
ಸ್ವಚ್ಛಮಾಗಿಹ ಗಂಗೆಯೊಳು ತೊಳೆಯುತ್ತಲಿರಲವನು ॥
ಅಚ್ಯುತಾಂಘ್ರಿಯು ನೆನೆದು ನುತಿಸುತ ।
ಮೆಚ್ಚಿನಾತಿಪು ಶುಕ್ತಿಯೊಳಗಿರೆ ।
ಮ್ಲೇಚ್ಛ ಕೇಳದ ರಾಮನಾಮುವ ಪರಮಹರುಷದಲಿ ॥೧೫॥

ಅಮಲಶುಕ್ತಿಯು ತೇಲಿಬರುತಿರೆ ।
ಸುಮಣಿಕರ್ಣಿಕಸಿಲೆಗೆ ತಗಲಿತು ।
ವಿಮಲಶುಕ್ತಿಯಕಂಡು ತೆಗೆದ ತಮಾಲಮೋಮಿಾನ ॥
ಮಮತೆಯಿಂದಲಿ ಜಾನಿಸುತ್ತಿಹ ।
ಕಮಲನೇತ್ರನ ಕಂಡು ಮುದ್ದಿಸಿ ।
ಸುಮತಿ ತನುಜನು ಎತ್ತಿಕೊಂಡನು ಪರಮಮೋಹದಲಿ ॥೧೬॥

ಅಟ್ಟಹಾಸದಿ ಪತ್ನಿಯನು ಕರೆ ।
ದಿಟ್ಟ ಪ್ರೀತಿಯು ಶಿಪುವ ಕೈಯೊಳು ।
ಬಿಟ್ಟು ಕಷ್ಟವ ನಪ್ಪಿಕೊಂಡಳು ಮಾತೃ ಭಾವದಲಿ ॥
ಟಟ್ಟ ಕುವರಪ್ರೇಮ ದೊರಕಲು ।
ಕೆಟ್ಟ ಬಂಜೆಯುತನವು ತೊಲಗಿತು ।
ಕಷ್ಟ ನೀಗಿದೆ ಪುತ್ರವತಿಯೆನಿಸುತ್ತ ನಾ ಜಗದಿ ॥೧೭॥

ಶ್ರೇಷ್ಠವಾಗ್ರಣಿ ಬಂದಸೆಂತುಟು ।
ಶ್ರೇಷ್ಠಜನಗಳ ಸುಳಿಪು ಮುಸಲರ ।
ಕಾಷ್ಠವಾಸಕೆ ಭಾರತೀಯನು ಪರಮದಚ್ಚರಿಯು ॥

ವಿಷ್ಣುಭಕ್ತರ ವೃಂದ ತೊರೆಯುತ |
ವಿಷ್ಣುಭಕ್ತರ ಸೇರಿದನು ನೆರೆ |
ವೈಷ್ಣವಾನರು 'ಸುಮ್ಮನಿರ್ಪರೆ! ಕ್ರೋಧಗೊಳ್ಳುವರು ||೧೮||

ರಾಮಭಜನೆಯು ಗೈವನೆಸ್ಮೃತ |
ಪ್ರೇಮಿಸರು ಸಲೆ ನಮ್ಮಜನಗಳು |
ರಾಮಮಂತ್ರವ ಬಿಡಿಸುತಲ್ಲಾ ಮಂತ್ರವನು ಕೊಡುವೆ ||
ಕೋಮಲಾಂಗನನಪ್ಪಿಕೊಳಲು |
ಪ್ರೇಮಮಯವಾಯಿತ್ತು ಹೃದಯವು |
ಕಾಮರೂಪನ ಚೆಲುವ ಪೊಗಳಲ್ಕೆಂದಳಾ ತರುಣಿ ||೧೯||

ಎನುತ ದಂಪತಿಯುಗಳು ಶಿಶುವನು |
ವನಜನಾಭನ ಭಕ್ತನೆನುತಲೆ |
ಘನಕಬೀರನ ಸಲಹುತಿರ್ದರು ಪುತ್ರಭಾವದಲಿ ||
ಜನನಿಜನಕರ ಪ್ರೀತಿಗೊಳಿಸುತ |
ಇನನಕುಲಜನ ದಾಸ ಬೆಳೆದನು |
ಮನದಿ ರಾಮನ ನೆನೆಯುತನುದಿನ ಸತ್ಯಮಾರ್ಗದಲಿ ||೨೦||

ಸದು ಮಾಡದೆ ಮೌನದಿಂದಲಿ |
ಮುದ ಭಾವದಿ ಬಹಳ ಸಂಭ್ರಮದಿ |
ನಿದೆಗೈಯ್ಯದೆ ಕಾಮುಪಿತನನು ನುತಿಪ ನನವರತ ||
ಬಿಪ್ಪ ಪಾಪದರಾಶಿಕೂಪದಿ |
ಬಪ್ಪರಾಗಿಹ ಜನರ ನೋಡುತ |
ಶುದ ಮಾನಸರಾಗಿ ಮಾಡುವಪರಿಯ ಚಿಂತಿಸುತ ||೨೧||

ಮೌನಮೋಹವಕಂಡು ಕಬಿರನ |
ಮೌನನಂ ತ್ಯಜಿಸೆಂದು ನಿಂದಿಸಿ |
ಗಾನಗೆ ಮುನಿಸರಿಯು ಹಾಸ್ಯವಮಾಡಿ ಕುಣಿಯುತಲಿ ||
ಮಾನಗೆಡಿಸಲು ಬಂದು ಕುಜನರು |
ಮೌನವ್ರತವನು ಭಂಗಗೈಯಲು |
ಏನುತಿರ್ಪುದೆ ತರ್ಕಮಾಡುತ ಜನರು ಮುತ್ತುವರು ||೨೨||

ಮನದಿ ನೋಯುತಲವರಕುಮತಿಗೆ ।
ಅನಘ ಚಿಂತಿಸಿ ಸಾಧುಮಾರ್ಗಕೆ ।
ಜನರ ಪತ್ತಿಗೆ ತಿಳಿಯಲಾರದೆ ಹರಿಯ ನರ್ಚಿಸುತ ॥
ವನಜನಾಭನ ಭಜನಕಾರ್ಯಕೆ ।
ಜನರ ಮನವನು ಸೆಳೆದು ರಾಮನ ।
ವಿನುತ ನಾಮದ ಮಹಿಮೆಯರುಹುವೆನೆಂದು ಯೋಚಿಸಿದ ॥೨೩॥

ಕ್ಷಮಿಸಿಕೊಂಡನು ತನಗೆ ತಾನೇ ।
ಕುಮತಿ ಜನಗಳು ತನಗೆ ಕೊಡುತಿಹ ।
ಕುಮತವಾದವನೆಲ್ಲ ಹೊಗಳಿಕೆಯೆಂದು ಭಾವಿಸುತ ॥
ಮಮತೆ ದೊರೆಯುತ ಸಕಲ ಜಗದೊಳು ।
ಮಮತೆ ಇರಿಸುತ ರಾಮಮಂತ್ರದಿ ।
ರಾಮಭಜನೆಯ ಗೈದು ಕುಣಿದನು ತಾನೆ ಮೋದದೊಳು ॥೨೪॥

ಸುತನ ಪರಿಯನು ಕಂಡು ತಾಯಿಯು ।
ಜತನದಿಂದಲಿ ಮಗುವ ಪರಿಕಿಸಿ ।
ಪತಿತಪಾವನನೆಂಬುದರಿಯದೆ ವಿಕಳನೆಂದರಿತು ॥
ಇತರಜನರಿಗೆ ತಿಳುಹಿ ಮಗುವನು ।
ಹಿತವಮೊರೆಯುತ ಶಿಕ್ಷೆಯಿತ್ತಳು ।
ಸುತ ಕಬೀರನು ರಾಮಗರ್ಪಿಸಿ ತೋಷದಿಂದಿರ್ದ ॥೨೫॥

ತನ್ನ ಕುವರಗೆ ಬೆಸಸಿ ನೂಲುವ ।
ಚೆನ್ನ ಕಜ್ಜವ ನಂದುಪೋಗಳು ।
ಉನ್ನತಾಮಲ ರಾಮಧ್ಯಾನದೊಳಿರ್ದ ಕವಿವೀರ ॥
ತನ್ನ ಕಾರ್ಯವ ಮರೆತು ರಾಮನ ।
ಚನ್ನನಾಮವ ಜಪಿಸುತಿರುತಿಹ ।
ತನ್ನ ಕುವರನ ಕಂಡು ರೋಷದಿ ತುಡುಕಿದಳು ನಾರಿ ॥೨೬॥

ಮತ್ತೆ ಬೆಸಸುತ ನೇಯ್ವಕಾರ್ಯವ ।
ಸತ್ತು ತೋರ್ದಳು ಸೂಕ್ಷ್ಮ ಪರಿಯನು ।
ಚಿತ್ತ ದೈವದ ಮಂತ್ರ ಕಾರ್ಯಕೆ ತಾಳವಾದುದದು ॥

ಮತ್ತೆ ರಾಮನ ಕರೆಯುತಳಲುತ ।
ಮತ್ತನಾದನು ತಾ ಸಮಾಧಿಯೊ।
ಳುತ್ತಮಾಂಗನ ರಾಮಚಂದ್ರನ ಮಂತ್ರಮೋಹದಲಿ ॥೨೭॥

ಒಂದುಬಾರಿಗೆ ದಾಳವೆಸೆಯುತ ।
ಒಂದುಬಾರಿಗೆ ರಾಮನೆನ್ನುತ ।
ಕಂದ ಕಬಿರನು ರಾಮಸೀತಾರಾಮನೆನ್ನುತಲಿ ॥
ನೊಂದು ಜಗದಲಿ ಸಾಧುಸಂತರ ।
ವೃಂದಕಿರುತಿಹ ಪರಿಯು ನೋಡುತ ।
ಲಂದು ಬೇಡಿದ ರಾಘುನಾಶೀರ್ವಚನವನು ಕಬಿರ ॥೨೮॥

ಇಷ್ಟದಿಂದಲಿ ಹರಿಯ ಮನದಲಿ ।
ಭ್ರಷ್ಟನಾಗದೆ ಪ್ರೀತಿಯಿಂ ನೆರೆ ।
ಶಿಷ್ಟರಕ್ಷಕ ಲಕುಮಿರಮಣನ ನೆನೆಯುತನವರತ ॥
ಕಷ್ಟವೆಣಿಸದೆ ಜನನಿಜನಕರ ।
ಕಷ್ಟನುಡಿಗಳ ಸಹಿಸಿ ಮನದೊಳು ।
ಶಿಷ್ಟ ಕಬಿರನು ಹರಿಯ ನುತಿಸುತ ಮನದೊಳೀತೆರದಿ ॥೨೯॥

ರಾಮ ಭಾರ್ಗವರಾಮ ಗೆಲದನೆ ।
ಶ್ಯಾಮವರ್ಣನೆ ರಘುಕುಲೋತ್ತುಮ ।
ಮಾಮನೋಹರ ಹರಿಯೆ ಶುಭಕರ ಪರಮ ಭಾಗ್ಯನಿಧಿ ॥
ಭೀಮಸೇವಿ ಸುರಾರಿಭಂಜಿತ ।
ಸ್ತ್ರೀಮಹಿತ ಕ್ಷೇಮಚಿಂತಕ ।
ಪ್ರೇಮದಿಂದಲಿ ಭಕ್ತಕೂಟವ ಸಲಹು ಶ್ರೀರಾಮ ॥೩೦॥

ಆವ ನಿನ್ನಂಘ್ರಿಯನು ಭಜಿಸಲು ।
ಆವ ನಿನ್ನಯ ನಾಮ ಭಜಿಸಲು ।
ಆವಗವು ನಿನ್ನಂಘ್ರಿಕಮಲದ ಧೂಳಿಯನೆ ನೀಡು ॥
ಆವ ನಿನ್ನಯ ರೂಪದೋರುತ ।
ಆವ ನಿನ್ನನು ಬಾಗಿ ನಮಿಸಲು ।
ನೀವಿದಶಿಶುವು ಭಕ್ತಿಭಾಗ್ಯವನಿತ್ತು ಪೊರೆಯುವುದು ॥೩೧॥

ಕರುಣಿಸಿದೆಲಾ ಭಾರಕೃತ್ಯವ ।
ಪರಮ ಕರುಣಾಶರಧಿ ಗೈಯಲು ।
ಅರಿಯೆ ನಾನೀಪರಿಯ ಕಾರ್ಯವ ಮಾಡೆ ಸರಿಯಹೆನೆ ? ॥
ನಿರುತ ನಿನ್ನನೆ ಕೀರ್ತಿಸುತ್ತಲಿ ।
ಪರಮ ಪಾವನ ಕಥೆಯ ಪೇಳುತೆ ।
ಕರೆವೆ ಜನರನು ನಿನ್ನ ಗೋಷ್ಠಿಗೆ ನಿನ್ನ ಕೀರ್ತನೆಗೆ ॥೩೨॥

ಎಂದು ಶ್ರೀಹರಿ ಧ್ಯಾನದಿಂದಿರೆ ।
ಅಂದು ಮರೆತನು ಬಾಹ್ಯಲೋಕವ ।
ಬಂದು ಮಾತೆಯು ಬೆಸಸಿ ಪೋಗಿಹ ಕಾರ್ಯವನು ಮರೆತ ॥
ನಂದನಂದನ ಭಜನಕಾರ್ಯದೊ ।
ಳಂದು ಮರೆತನು ತನ್ನ ದೇಹವ ।
ಕಂದ ಕುಳಿತನು ಮನದಿ ಪರಮಾನಂದಗೊಳ್ಳುತಲಿ ॥೩೩॥

ತನ್ನ ಭಕ್ತನ ತಾಯಿ ಕಾಡುವ ।
ಮುನ್ನ ಕಾಯುವೆನೆನುತ ರಾಮನು ।
ಬನ್ನವಂ ಕೈಕೊಂಡು ನೇಯ್ಗೆಯ ಕಜ್ಜ ಕನುವಾದ ॥
ನನ್ನುತಾಂಗನು ವಸ್ತ್ರವೊಂದನು ।
ತನ್ನ ಹಸ್ತದಿ ನೇದುಬಿಟ್ಟನು ।
ತನ್ನ ಭಕ್ತನ ತಾಯಿ ಬರುವುದ ಕಂಡು ಶೀಘ್ರದಲಿ ॥೩೪॥

ರಾಮಚಂದ್ರನು ಕಂಡು ಬೇಗನೆ ।
ಪ್ರೇಮದಿಂದಲಿ ನೇದ ವಸನವ ।
ನಾ ಮಹಾತ್ಮನ ಬಳಿಯೊಳಿರಿಸುತ ತಾನು ಮರೆಯಾದ ॥
ರಾಮನಂತರ್ಧಾನನಾಗಲು ।
ಕೋಮಲಾಂಗ ಕಬೀರ ಕಣ್ತೆರೆ ।
ದಾ ಮಹಾತ್ಮನ ನೋಡುತಿರಲಾ ವಸನವನು ಕಂಡ ॥೩೫॥

ಅರಿತು ಮನದಲಿ ರಾಮಕಾರ್ಯವ ।
ಪರಮ ಮುದದೊಳು ಬಂದ ಮಾತೆಗೆ ।
ಕರದೊಳಿತ್ತನು ಪೊಳೆವ ವಸ್ತ್ರವ ನನಘ ಭರದಿಂದ ॥

ಹರಿಣಲೋಚನೆ ಕಂಡು ಸೊಗಸನು |
ಕರದೊಳಪ್ಪಿತ ಕಬಿರ ಕುವರನ |
ಪರಮ ಪ್ರೀತಿಯೊಳವಚಿಕೊಂಡಳು ತನ್ನ ಹೃದಯದೊಳು ||೩೬||

ಮುಟ್ಟೆ ದಹಿಪುದು ಪಾಪರಾಶಿಯು |
ದಿಟ್ಟಿಸಿದಡಾ ನಾಕ ಕೊಯ್ಯುವುದು |
ಮುಟ್ಟೆ ಪೊದೆಯಲು ಪರಮ ಮೋಕ್ಷಾಮೃತವ ನೀಡುವುದು ||
ಬಿಟ್ಟು ಬಾರದು ಮನವು ನೋಡದೆ |
ತೊಟ್ಟುಬಿಡುವೆನೆನುತ್ತ ಸರ್ವರು |
ಬಟ್ಟೆ ಸಿರಿಪತಿ ಕೊಟ್ಟ ಪೀತಾಂಬರಕೆ ಸರಿಯೆಂದು ||೩೭||

ಬಟ್ಟೆಯಿತ್ತನು ಪಾಪಹರಣಕೆ |
ಬಟ್ಟೆ ತೋರಿದ ಪುಣ್ಯಲೋಕಕೆ |
ಬಟ್ಟೆ ನೆಯ್ದನು ಭಕ್ತಗೋಸುಗ ಕರ್ಮನೀಗಲ್ಕೆ ||
ಬಿಟ್ಟು ಸಕಲೈಶ್ವರ್ಯಸಂಪದ |
ತೊಟ್ಟು ವೈರಾಗ್ಯವನು ಹರಿಪದ |
ಗುಟ್ಟು ತಿಳಿದಿಹ ನರಗೆ ಕೊಟ್ಟನು ದಿವ್ಯ ವಸನವನು ||೩೮||

ಏನುಹೇಳುವೆ ನಿದರ ಸೊಗಸಿಗೆ |
ಜಾಣ ನೀನಹುದೆಂದು ಪೊಗಳುತ |
ನೀನು ಸಂತೆಗೆ ಪೋಗಿ ಮಾರುತ ಬಂದ ಪ್ರತಿಫಲವ ||
ಹಾಸಿಗ್ಗೆಯ್ಯಾವೆ ತಂದು ಕೊಡುವುದು |
ಪ್ರಾಣಸುತ ಹೋಗೆಂದು ಕಳುಹಲು |
ಜ್ಞಾನನಿಧಿ ನೆನೆಯುತ್ತ ರಾಮನ ನಡೆದ ಬಟ್ಟೆಯೊಳು ||೩೯||

ಮಾತೆಯಾಜ್ಞೆಯ ವಹಿಸಿ ಪದುಳದಿ |
ನೀತಿಕೋವಿದ ಸಾರಿ ಕುಳಿತನು |
ನೂತನಾಂಬರ ಕೌಪೀನಸುತಲೊಂದುಕಡೆಯಲಿ ||
ಖ್ಯಾತನಾದನು ಜಗದಿ ಸಾಧು |
ಪಾತ್ರನನು [illegible] |
ರೀತಿಯಲಿ ಪರಿಕಿಸಲು ಜಗದೊಳು ನೀಚ ಸೇವಕರ ||೪೦||

ತುಂಬಿ ಸಂತರ ಮೂಲಕೆಗೆಯಲು ।
ತುಂಬ ಯತ್ನವ ಮಾಡುತಿಹರೀ ।
ಡಂಭಚಾರರು ಧನದೊಳಾಶೆಯನಿಟ್ಟು ಕೆಡುತಿಹರು ॥
ನಂಬಿ ಕೊಡಲೇ ಧನದರಾಶಿಗೆ ।
ಜಂಭಗಾರರ ಕರದೊಳಕ್ಷಯ ।
ವೆಂಬ ಪದವಿಯ ನೀವ ವಸನವ ಕೆಲವು ಕಾಸಿಂಗೆ ॥೪೧॥

ಈ ದುಕೂಲವ ರಾಮ ನೇದನು ।
ಮೋದದಿಂದಲಿ ನೂಲ ನಿಟ್ಟನು ।
ಸಾಧುಮಾರ್ಗವನೆಸೆವ ನೂಲೊಳು ತೋರಿ ಮೈದೋರಿ ॥
ಕಾದ ಪಾಪವ ತೊಳೆದು ತಣಿಸಲು ।
ಸಾಧು ಬಟ್ಟೆಯ ಮಾಡಿಕೊಟ್ಟನು ।
ಬೋಧಿಸುತ್ತಲಿ ಹೊನ್ನು ವನಿತಾ ಮಣ್ಣು ಸಟೆಯೆಂದು ॥೪೨॥

ಇಂತಿರಲ್ಕಿಂ ವಸನ ಕೊಳ್ಳಲು ।
ಅಂತರಾತುಮ ತಾನೆ ಬಾರನೆ ।
ಚಿಂತೆ ಯೇತಕೆ ಹರಿಯೆ ಪಾತ್ರನು ಹೊದೆಯಲಿವನೋಡೆ ॥
ಅಂತಿರಲು ನಾನೇಕೆ ಚಿಂತಿಸಿ ।
ಚಿಂತೆಗಾಸರೆಯಾಗಿ ಬಳಲಲಿ ।
ಸಂತೆಯಾಗಲಿಯೆಂದು ಮೌನಸಮಾಧಿಯೊಳು ಕುಳಿತ ॥೪೩॥

ಶ್ರೀರಮಾಧವ ಧ್ಯಾನದಿಂದಲಿ ।
ಭೂರಿವಸನವ ಕ್ರಯಕೆ ಕೊಡುವುದ ।
ಸಾ ರಮಾವರ ಭಕ್ತ ಮರೆಯುತಲಿದ್ದ ಮೌನದೊಳು ॥
ಸಾರಿ ಬಂದರು ಕ್ರಯಕೆ ಕೊಳ್ಳಲು ।
ಮೂರುನಾಮದ ಕ್ರೂರಬುದ್ಧಿಯ ।
ಪಾರಮತಿಗಳು ನೋಡಿ ನೋಡುತ ದೂರಸಾರಿದರು ॥೪೪॥

ಮತ್ತೆ ಕೆಲವರು ಪಿಡಿದು ನೋಡುತ ।
ಉತ್ತಮೋತ್ತಮ ವಸ್ತ್ರವಿದನನು ।
ಚಿತ್ರಕೌಶಲದಿಂದ ನೇದಿಹ ನಿವನು ಚೆಂದದೊಳು ॥

ಸತ್ಯನುಡಿಯುವೆ ಭಾರಿ ಕ್ರಯವ ।
ನ್ನಿತ್ತು ಪಡೆಯಲು ಯೋಗ್ಯವಸ್ತ್ರವು ।
ಮಿತ್ರ ನೀತನು ನಿದ್ರಿಸುತ್ತಿಹನೆಂದು ಪೇಳಿದರು ॥೪೫॥

ಒಂದು ಪೇಳ್ವರಿಗೆರಡರಂದದಿ ।
ಮುಂದೆ ದಶಕುಲದಿಂದ ಬೆಳೆಯುತ ।
ಒಂದುಶತ್ತಮಾನದಲಿ ಬಯಸಲು ಸಾವಿರಾಂಶದಲಿ ॥
ಮಂದರಾದ್ರಿಯಮೇಲೆ ಮಿಾರುತ ।
ಕುಂದದತಿಶಯದಿಂದ ಲಧಿಕದೊ ।
ಳೆಂದು ತೋರ್ದುದು ರಾಮವಸನವು ಸಕಲ ಜನವ್ರಜಕೆ ॥೪೬॥

ಒಬ್ಬ ಕಂಡನು ರಾಮನರ್ತನ ।
ನೊಬ್ಬ ನೋಡಿದ ರಾಮನಾಮವ ।
ನೊಬ್ಬ ನೋಡಿದ ಬರಿಯ ವಸನವನಾಗ ಕಬಿರನೊಳು ॥
ಒಬ್ಬ ನೋದಿದ ವೇದಶಾಸ್ತ್ರವ ।
ನೊಬ್ಬ ನೋದಿದ ಕಾಮಮಂತ್ರವ ।
ನೊಬ್ಬ ಕಂಡನು ಬಹಳ ಧನವನು ಲಕುಮಿ ನರ್ತನೆಯ ॥೪೭॥

ಇಷ್ಟು ದ್ರವ್ಯವನೆಲ್ಲ ತರುವೆವು ।
ಇಷ್ಟಪಟ್ಟರೆ ಸಾಹುಕಾರರ ।
ಬಟ್ಟೆಯಾಯಿತ್ತೆಂದು ಜನಗಳು ಪೊಗಳಿ ಪೋಗುತಿರೆ ॥
ಇಷ್ಟು ಭಾರಿಯ ಬಟ್ಟೆ ಧರಿಸಲು ।
ಮುಟ್ಟಲಾಗದು ಕೆಟ್ಟಹಾದಿಯು ।
ಬಿಟ್ಟುಬಿಡುವುದೆ ಲೇಸು ನಮಗೆಂದೆನುತ ತಿರಳಿದರು ॥೪೮॥

ವನಕಬೀರನು ರಾಮಧ್ಯಾನದಿ ।
ನಿರತನಾಗಿರೆ ಕ್ರಯಕೆ ಕೊಂಬುವ ।
ನರರು ನಿಲ್ಲದೆ ಸಂಜೆಯಾಗಲು ಪೋಗಿರವಸರದಿ ॥
ವರದುಕೂಲದ ಬೆಲೆಯು ಸರಿಯದೆ ।
ಇರದೆ ಪೊಗಳುತ್ತವನ ಗುಣಗಳ ।
ಹರಿಯ ಭಕತರು ನಮಿಸಿ ತೆರಳಿದರಾಗ ಕಬಿರನನು ॥೪೯॥

ಕೆಲರು ದುಷ್ಟರು ಜರೆದು ದೂಷಿಸಿ।
ಕೆಲರು ಶಿಷ್ಟರು ಭರದಿ ಪೊಗಳುತ।
ಹಲವು ಪರಿಯಲಿ ನುಡಿದು ಪೋಗುತಲಿರಲು ಲಕ್ಷಿಸದೆ ॥
ಜಲಜನಾಭನ ಪದವ ನೆನೆಯುತ।
ಲಲಿತಮಾನಸ ಭಜನಕಾರ್ಯವ।
ಸವಿಸಿ ನಯನವ ತೆರೆದು ನೋಡಲು ರವಿಯು ಪಶ್ಚಿಮದಿ ॥೫೦॥

ಕಬಿರದಾಸನ ರಾಮಭಕ್ತಿಗೆ।
ನಭದಿ ದಿನಕರ ನಾಚಿಕೊಳ್ಳುತ।
ಸೊಭಗ ದೊರೆಯುತ ಲೀದ ಪಶ್ಚಿಮಜಲಧಿ ಮಧ್ಯಮೊಳು ॥
ಸುಭಗ ನೀಗುತ ಜಗವು ನಿಶಿಯೊಳ।
ಕಬಳವಾಗಲು ಸಂಭ್ರಮದಿ ನೆರೆ।
ನಭಮೊಳೇರಿದ ಚಂದ್ರ ತಾರಾಪಥವ ಸಾಳಲ್ಕೆ ॥೫೧॥

ಕರವ ಪಿಡಿದಳು ರಜನಿ ಚಂದ್ರನ।
ಭರದಿ ಮುತ್ತಿಕ್ಕಿದಳು ಮಿಗನನು।
ಕರೆದು ರಮಣನ ಪೂರ್ವನೀಲಾಕಾಶದೊಳು ನಲಿದು ॥
ಬರುತ ಕಂಡನು ತನಗೆ ಮಿಗಿಲಾ।
ಗಿರುವ ಸಿರಿರಘುರಾಮಚಂದ್ರನ।
ಚರಣಭಜಕನ ನೋಡಿ ನಾಚಿದನಂದು ಶಶಿಧರನು ॥೫೨॥

ಕತ್ತಲಾಗಲು ಕಬಿರ ಭಯದಿಂ।
ದತ್ತಲಿತ್ತಲು ನೋಡಿ ಮಾತೆಗೆ।
ಉತ್ತರವ ನೇನೆಂದು ಪೇಳಲಿ ಕಾಣೆನೆನ್ನುತಲಿ ॥
ಕತ್ತಲಾದುದು ಜಗವು ಮಾಯಾ।
ಮತ್ತವಾದುದು ಕ್ರಿಯಕೆ ಕೊಂಬರ।
ನೆತ್ತ ನರಸಲಿ ತಿಳಿಯೆನೆನ್ನುತ ಕಬಿರ ಚಿಂತಿಸಿದ ॥೫೩॥

ಪಡೆದು ಧ್ಯಾನಾಸಕ್ತನಾಗುತ।
ಪದುಮನಾಭನ ನಾಮ ಜಪಿಸುತ।
ಸದಯ ಕುಳಿತನು ಮರೆತು ಜಗವನು ಭಕ್ತಿಪರವಶದಿ ॥

ಗಡಗಡನೆ ನಡುಗುತ್ತ ಛಳಿಯಿಂ ।
ದೊದರುತೊಬ್ಬ ಫಕೀರ ಬಂದನು ।
ಚದುರ ಕಬಿರನ ಕಂಡು ನಡುಗುತ ವಸನ ಯಾಚಿಸಿದ ॥೩೪॥

ನಾಡುಬೇಡೆನಗಿಲ್ಲ ಜಗದೊಳು ।
ಬೇಡುವೆನು ನಾ ಸಾಧು ಸಂತರ ।
ಬೇಡೆ ನಾನಿನ್ನಾರನೀಪರಿ ಬಳಲಿದೆನು ತಣಿದು ॥
ನೀಡಿದಾವನರಾಶಿಶಯನವು ।
ಮಾಡು ಬಿಗಿದಾಕಾಶವಸ್ತ್ರವು ।
ನೋಡರೆನ್ನನು ಜಗದಿ ಕರುಣಾಪೂರ್ಣದಿಟ್ಟಿಯಲಿ ॥೩೫॥

ನಡುಗುತಿಹೆ ಛಳಿಯಿಂದ ಸೋದರ ।
ಪಡುತಿಹೆನು ಬಹುಕಷ್ಟ ಜಗದೊಳು ।
ಜಡಶರೀರವು ನೊಂದು ನೋವನು ಕೊಡಲು ಸಿಲ್ಕುತಲಿ ॥
ಜಡಧಿಶಯನನ ಭಕ್ತ ನೀನಿಹೆ ।
ಕೊಡು ದುಕೂಲವನೆನಗೆ ಪದುಳದಿ ।
ಪಡೆದು ನೀಗುವೆ ಕಷ್ಟವೆನ್ನಯವೆಂದ ರಘುವೀರ ॥೩೬॥

ಕಂಡು ಫಕಿರನ ನೊಂದು ಕಬಿರನು ।
ದಂಡಿಸುತ್ತಿಹ ಜನರಿಗ್ಹೆದರುತ ।
ಕಂಡ ರಾಮಧ್ಯಾನದಿಂದಲಿ ರಾಮ ಫಕಿರನನು ॥
ಖಂಡಮಾಡುತ ವಸನನವರ್ಘವ ।
ಕೊಂಡು ಹೊದಿಸಿದ ಫಕಿರಮೂರ್ತಿಗೆ ।
ಮಂಡೆಯಾಘ್ರಾಣಿಸುತ ಕಬಿರನ ತಡವುತಾ ಸಾಧು ॥೩೭॥

ಇರದೆ ಕಣ್ಮರೆಯಾಗೆ ನಿಮಿಷದಿ ।
ಪರಮ ಕರುಣಾವನಧಿ ರಾಮನು ।
ಧರಣಿಯಮರನ ವೇಷದಿಂದಲಿ ಬಂದ ನಡುಗುತಲಿ ॥
ಬರುವ ವಿಪ್ರನ ಕರೆದು ಕೂರಿಸಿ ।
ಪರಮ ಹರುಷದಿ ನಮಿಸಿ ನೋಡುತ ।
ಹರಿದ ವಸ್ತ್ರವ ಹೊದಿಸುತಾಗಲೆ ಕುಣಿದ ಕವಿವೀರ ॥೩೮॥

ರಾಮಚಂದ್ರಗೆ ಕೊಟ್ಟುಬಿಟ್ಟೆನು ।
ರಾಮರಚಿಸಿದ ವಸ್ತ್ರವೆಲ್ಲವ ।
ರಾಮಮಯವಾಗಲ್ಕೆ ಜಗವಿದು ಬೇಡುವೆನು ಹರಿಯ ॥
ರಾಮನಂಘ್ರಿಯು ನೆರಡುಸಮುದದಿ ।
ಪ್ರೇಮ ತೋರಿದವನೆನಗೆ ಮುದದೊಳು ।
ನೇಮದಿಂದಲು ಸಾಧುವಾಯಿತ್ತೆನ್ನ ಜನುಮವಿದು ॥೪೯॥

ವೃದ್ಧವಿಪ್ರನು ಕಾಣದಾದನು ।
ಹೊದ್ದ ವಸನವು ಮಾಯವಾದುದು ।
ಗೆದ್ದೆ ವಸ್ತ್ರವಕೊಡುತ ನಾನೀಗೆಂದು ರಘುಪತಿಯು ॥
ಬದ್ಧಮಾನಸನಾಗಿ ಜಪಿಸುತ ।
ಬುದ್ಧಿ ಬಿಡುತಲಿ ಬಾಹ್ಯಲೋಕದಿ ।
ಅದ್ದಿ ಮುಳುಗಿದ ಕಬಿರನು ನಾಮಾಮೃತದ ಶರಧಿಯೊಳು ॥೫೦॥

ಬಾಲರೂಪವತಾಳಿ ರಾಮನು ।
ಕಾಲತೆಗೆದನು ಕಬಿರನಿಲಯಕೆ ।
ಬಾಲಕಬಿರನ ಮಹಿಮೆಯನ್ನುರೆ ತೋರೆ ಜನರಿಂಗೆ ॥
ನೀಲರೂಪನು ಕಬಿರಜನನಿಯ ।
ನೇಹಿಸುತ್ತಲಿ ತಾಯೆ ನಿನ್ನಯ ।
ಬಾಲನಾಗಲೆ ವಸ್ತ್ರವಿತ್ತನು ಫಕಿರ ವಿಪ್ರಂಗೆ ॥ ॥೫೧॥

ಕ್ರಯಕೆ ನಾರದೆ ಧರ್ಮಗೈದನು ।
ನಯದಿ ನಿನ್ನಯ ಬಳಿಗೆ ಬರಲಿಕೆ ।
ನಯದಿ ಕುಳಿತಿಹ ಮೌನದಿಂದಲಿ ನುಡಿಯದಾರೊಡನೆ ॥
ದಯವ ತೊರೆಯುತ ಶಿಕ್ಷೆಯಿತ್ತೊಡೆ ।
ನಯಕೆ ಬರುವನು ವಿದಿತಕಾರ್ಯವ ।
ಭಯದಿ ಗೈವನು ಬಿಟ್ಟುಕೊಟ್ಟೊಡೆ ಧರ್ಮಮಾಡುವನು ॥ ॥೫೨॥

ಬಿಡುಬಿಡೆಂಧಾದಯುವ ಸುತನೊಳು ।
ಕೊಡುಕೊಡೀಗಲೆ ಕೋಲಿನಿಂದಲಿ ।
ಹೊಡೆದೊಡವನನು ಬಿಡುತ ಮೌನವತೊರೆದು ನಿದ್ರೆಯನು ॥

ತೊಡುವ ನೀತಿಯ ನೋಡೆನಲ್ಕಾ ।
ನುಡಿಗೆ ಮರುಳಾಗುತ್ತ ನಾರಿಯು ।
ಹೊಡೆದುಬಿಟ್ಟಳು ಸುತನ ಬೆನ್ನಿಗೆ ಕಾಷ್ಟದಂಡದೊಳು ॥೬೩॥

ಎಲವೊ ವಸ್ತ್ರವ ನೇನಮಾಡಿದೆ ।
ಛಲವ ಬಿಡುತಲಿ ಪೇಳು ಬೇಗನೆ ।
ಖಳನೆ ಬಿಡು ಮೌನವನು ತೋರೆಲೊ ವಸ್ತ್ರವನ್ನೀಗ ॥
ಎಲವೊ ಬಡಿವೆನು ನಿನ್ನನೆನ್ನುತ ।
ಛಲದಿ ಝುಡಿಯಲು ಸುತನ ಸ್ಥಿರತೆಯ ।
ಜಲಜನಾಭನು ಕಂಡು ಪರಮಾನಂದ ಪಡುತಿದ್ದ ॥೬೪॥

ಬಾಲಕಬಿರನ ತರುಣಿ ತೊಡೆದರೆ ।
ಬಾಲರಾಮನ ಬೆನ್ನ ಚರ್ಮವು ।
ಸೀಳಿಹೋಗುತ ರುಧಿರಧಾರೆಯು ಹರಿದುಬಂದುದಲಾ ॥
ಬಾಲಭಕ್ತನೊಳಡಗಿ ನಿಂದಿಹ ।
ಜಾಲಕರ್ತಗೆ ತಗಲಿ ನೊಂದಿತು ।
ನೀಲಲೋಚನೆ ಹೊಡೆತವೆಲ್ಲವು ತೋರಿದನು ಮಹಿಮೆ ॥೬೫॥

ತಾಯೆ ಬಿಡುಬಿಡು ತಡೆಯಲಾರೆನು ।
ಘಾಯವಾದುದು ಎನ್ನ ಬೆನ್ನೊಳು ।
ಸಾಯಬಡಿಯಲ್ಕೆನ್ನ ಭಕ್ತನ ನೀನು ಕೋಪದಲಿ ॥
ತಾಯೆ ಕಬಿರನೊಳಿರಲು ನಾನೇ ।
ಘಾಯವಾದುದು ರುಧಿರ ಹರಿವುದು ।
ಮಾಯಜಾಲವ ನೆಸೆದ ಕಬಿರನು ನೋಡು ನೀನೆಂದ ॥೬೬॥

ರಾಮಚಂದ್ರನು ಕೊಟ್ಟ ದರುಶನ ।
ವಾ ಮಹಾತ್ಮ ಕಬೀರದಾಸಗೆ ।
ಕಾಮಿನೀಮಣಿ ಕಬೀರಮಾತೆಯು ಬಿಕ್ಕಿ ಬೆರಗಾಗಿ ॥
ಕಾಮಿಸಿದಳಾ ಸುತನ ಭಕ್ತಿಗೆ ।
ಪ್ರೇಮದಿಂದಲಿ ತಿಳಿದು ನೋಡಿದ ।
ಳಾ ಮಹೀಶನ ದಿವ್ಯರೂಪವನಾಗ ಭಕ್ತಿಯೊಳು ॥೬೭॥

ಪೊಳೆವ ರತ್ನದಮುಕುಟ ಶಿರದೊಳು |
ತೊಳಗಿ ಬೆಳಗುವ ಕರ್ಣಕುಂಡಲ |
ತಿಲಕ ಫಣೆಯೊಳಗಿರಿಸಿ ಪೀತಾಂಬರವ ಧರಿಸಿಹನು ||
ಫಲಿತಹಸ್ತದಿ ಪಿಡಿದು ಧನುವನು |
ಲಲಿತ ದೇಹದ ಕಾಂತಿ ಪಸರಿಸಿ |
ಲಲನೆ ಸೀತಾರಮಣಿ ಸಹಿತಲೆ ಬಂದ ಶ್ರೀರಾಮ ||೬೮||

ಹರಿಯನನುಪಮ ದಿವ್ಯತೇಜನ |
ವರಕಬೀರನ ಜನನಿ ನೋಡುತ |
ಪರಮದಚ್ಚರಿಗೊಂಡು ತಿಳಿಯದೆ ತನ್ನ ಕಜ್ಜವನು ||
ವರದ ಕುವರನ ಭಕ್ತಿ ಶಕ್ತಿಯ |
ನರಿತು ದುಃಖಿಸಿ ತನ್ನ ತಪ್ಪಿಗೆ |
ಭರದಿ ಚುಂಬಿಸಿ ಮಗನ ನಪ್ಪಿದಳಾಗಲಾ ತರುಣಿ ||೬೯||

ರಾಮಚಂದ್ರನು ತನಗೆ ತೋರಿದ |
ರಾಮರೂಪವ ಮನದಿ ಕಾಣುತ |
ಕಾಮರೂಪನ ದಿವ್ಯತೇಜವ ನೋಡೆ ಕಣ್ತೆರೆದು ||
ಶ್ಯಾಮಲಾಂಗನ ನೋಡಿ ತೋಷದಿ |
ಪ್ರೇಮದಿಂದಲಿ ನಮಿಸಿ ಹರಿಯನು |
ಸೋಮಸುಂದರವದನ ರಾಮನ ತುತಿಸಿದನು ಭರದಿ ||೭೦||

ಜಯ ಜಯತು ಜಯ ಜಯತು ರಘುವರ |
ಜಯಜಯಾಂ[illegible]ಕಃಪ್ರಮುಖ ಮುರಹರ |
ಜಯತು ರವಿಕುಲ ಸಾರ್ವಭೌಮನೆ ಜನಕಜಾರಮಣ ||
ಜಯ ಚತುರ್ಮುಖ ಜನಕ ರಾಮನೆ |
ಜಯವಿಭೀಷಣಮಿತ್ರ ಭಕ್ತರ |
ಭಯವಿದೂರನೆ ಶರಣು ನಿನಗೆಂದಧಿಕಭಕ್ತಿಯಲಿ ||೭೧||

ರಾಮನಾಶೀರ್ವದಿಸಿ ಭಕ್ತನ |
ಕಾಮಿನೀಯಳಿಗಿತ್ತು ವರಗಳ |
ರಾಮಭಜನಾಕಾರ್ಯವನ್ನುರೆ ಜಗದಿ ತಿಳುಹಲ್ಕೆ ||

ರಾಮನಾಮದ ಮಹಿಮೆ ಜನರಿಗೆ ।
ಪ್ರೇಮದಿಂದಲಿ ಬೋಧಿಸುತ್ತಲಿ ।
ರಾಮಮಂತ್ರವ ಬಿತ್ತಲೋಸುಗ ಕಬಿರಗಾಣತಿಯು ॥೭೨॥

ಕೊಟ್ಟು ರಾಮನು ಮಾಯವಾದನು ।
ಕೊಟ್ಟು ದರುಶನ ಹರಿಯು ಕಬಿರಗೆ ।
ದಿಟ್ಟನಿವನಿಹನೆನುತ ಜನಗಳು ತಿಳಿದು ಪೊಗಳುತಲಿ ॥
ಬಿಟ್ಟುಬರುವನು ಸಕಲಕಾರ್ಯವ ।
ದಿಟ್ಟಕಬಿರನು ಗೈವ ಕೀರ್ತನ ।
ವಷ್ಟು ತಿಳಿಯಲು ರಾಮ ವಿಠಲಸಂಸ್ಕೃಭಜನೆಯೊಳು ॥೭೩॥

೧ ನೇ ಸಂಧಿ ಪದ್ಯ ೭೫ ಕ್ಕೆ ಮಂಗಳಮಸ್ತು



## ಎರಡನೆಯ ಸಂಧಿ

ಸೂ|| ಭೂರಿಯಾತ್ರೆ ಕಮಾಲಗೈದನು |
ಚೋರಕೃತ್ಯವ ಗೈದು ಸಂತರ |
ಪಾರವೃಂದವ ತಣಿಸಿ ಭಕ್ತಿಯ ಮಹಿಮೆ ಪಸರಿಸಿದ ||

ರಾಮಭಜನಾಮೃತವ ನಿತ್ತನು |
ಕೋಮಲಾಂಗ ಕಬೀರದಾಸನು |
ಪ್ರೇಮದಿಂದಲಿ ಜಾತಿಮತ್ಸರವಳಿದು ರಘುವರನ ||
ನಾಮಮಹಿಮೆಯ ವಿವರಿಸುತ್ತಲಿ |
ರಾಮಕೀರ್ತನಮಾಡಿ ನಲಿಯಲು |
ನೇಮವಿತ್ತನು ಭರತಖಂಡದ ಸಾಧುವೃಂದಕ್ಕೆ ||೧||

ವರಿಸಿ ಸುಂದರಬೀಬಿವನಿತೆಯ |
ಹರಿಯನಾಮವ ಬೋಧಿಸಿದನಾ |
ತರಳೆಗಾಗಲೆ ರಾಮಮಂತ್ರವ ಪಾಡಿ ನಲಿಯಲ್ಕೆ
ಹರಿಯು ಕರುಣದಿ ಪುತ್ರನೋರ್ವನು |
ದೊರಿತ ಕಬಿರಗೆ ಶ್ರೇನಕಮಾಲನು |
ಮೆರೆದ ಸತಿಪತಿಯು ರಾಮಭಕ್ತಿಯುತೋರಿ ನಲಿಯುತಲಿ ||೨||

ಪಿತಕಬೀರನತೆರದಿ ಕಮಲನು |
ಸತತ ಚಕ್ಕರ ಕೂಟದೊಳು ನಲಿ |
ಯುತಲಿ ಸದುಳವಿ ರಾಮಕೀರ್ತನ ಶ್ರವಣಮಾಡುತಲಿ ||
ಪಿತನನುಜ್ಞೆಯಕೊಂಡು ನಡೆದನು |
ಹಿತದಿ ಯಾತ್ರಾಸ್ಥಳಕೆ ಭರದೊಳು |
ಸ್ತುತಿಸಿ ರಾಮನ ಪಾದಯುಗಳವನಾ ಕಮಾಲ ಮಿಗೆ ||೩||

ದ್ವಾರಕಾಪುರಿ ಮಧುರೆ ಫಂಡರಿ |
ಭೂರಿ ಕಾಶಿ ಪ್ರಯಾಗ ಬದರೀ |
ಸಾರ ಗೋಕರ್ಣಾದಿ ಕ್ಷೇತ್ರವನೆಲ್ಲ ಸಂಚರಿಸಿ ||

ಭಾರತೀಯರ ಸಾಧುವೃಂದವ ।
ಪಾರಭಕ್ತರ ಕೂಟಕೆಳೆದನು ।
ಸಾರಸಾಕ್ಷನ ದಿವ್ಯಮಹಿಮೆಯ ತೋರಿ ಭಕ್ತರಿಗೆ ||೪||

ಭಕ್ತಕೋಟಿಯ ಮಧ್ಯೆ ಮೆರೆದನು ।
ಕಿತ್ತು ದುರಿತದ ಬೇರನೆಲ್ಲವ ।
ನೆತ್ತನೋಡಲು ರಾಮಭಜಕರ ಪೆರ್ಚಿಸಿದನಾಗ ॥
ಉತ್ತಮಾಂಗನು ಬಂದ ದ್ವಾರಕೆ ।
ಗಿತ್ತ ಕೀರ್ತನಸುಧೆಯ ಪಾನವ ।
ನಿತ್ತು ಪಸರಿಸಿ ಸತತ ಭಕ್ತರಕೋಟಿಯೊಳು ನಲಿದ ||೫||

ಧನಿಕನೋರ್ವನು ರಾಮಕೀರ್ತನ ।
ಧನಕೆ ಮೋಹಿಸುತಮಲರತ್ನವ ।
ಘನಕಮಾಲಗೆ ಪಾರಿತೋಷಕವಾಗಿ ಕೊಡಲದಕೆ ॥
ಧನವನಾಶಿಪನಲ್ಲ ನಾಸಿಂ ।
ಧನಕೆ ಮಾರುವನಲ್ಲ ಸಿರಿಪತಿ ।
ಯನಘನಾಮಕೆ ಬೆಲೆಯು ಬೊಪ ಪರಿ ಬೇಡ ಯೋಗಿನ ||೬||

ಗಳಿಸಬೇಕ್ಕೆ ಭಕ್ತಿಧನವನು ।
ಫಲವು ಬಹುದೈ ರತ್ನನಿಕರವು ।
ಜಲದಮೋಲಿನ ಗುಳಿ ಯಂದದಿ ಬಹಳ ಚಂಚಲವು ।
ಉಳಿದು ಪ್ರಪಿಕ ಮಮತೆಯಿಲ್ಲ ।
ಜಲಜನಾಭನ ಪಾದ ನಂಬಿದಿ ।
ಫಲವಪೇಕ್ಷಿಸಬೇಡ ಬಿಡಿಬಿಡಿ ಕಾನ ಸಿಂಪೋಂದ ||೭||

ಎಂದು ರತ್ನವ ತೆಗೆದುಕೊಳ್ಳದೆ ।
ನಿಂದು ಕೀರ್ತನ ಮಾಡುತಿರಲಾಗ ।
ಒಂದಸಮಯದ ಕಥೆಯ ಕೇಳುತ ಸಾಧು ಮಾನುತೆ ಬಲ ॥
ಬಂದು ತೀರ್ಥಯುವತಿಗೆ ರತ್ನವ ।
ಛಂದದಿಂದಲಿ ವರದಮಾಲನ ।
ಡೊಂಬು ವಸ್ತ್ರದಿ ಕಟ್ಟಿ ಪೇಳಿಪೆ ನಡೆದ ನಿಜಗೃಹಕೆ ||೮||

ತೀರ್ಥಯಾತ್ರೆಯ ಮುಗಿಸಿ ಕಮಲನು ।
ಪಾರ್ಥಮಿತ್ರನ ಮಹಿಮೆಯರುಹುತ ।
ಕೀರ್ತಿಪೊಂದಿದ ಪಿತನ ನೋಡಲು ನಡೆದ ತವಕದೊಳು ॥
ಆರ್ತಿಯಿಂದಲಿ ವಿಷ್ಣುದಾಸನು ।
ಸುತ್ತಿಕಟ್ಟಿದ ರತ್ನ ಕಂಡನು ।
ವ್ಯರ್ಥವಾದುದು ತನ್ನ ಯಾತ್ರೆಯೆನುತ್ತ ಚಿಂತಿಸಿದ ॥೯॥

ರೋಷಗೊಳಿಸಿದ ವಿಷ್ಣುದಾಸನು ।
ರೋಷದಿಂದಲಿ ಕಟ್ಟಿ ವಸ್ತ್ರಕೆ ।
ದೋಷಗೊಳಿಸುವ ರತ್ನವಿದನು ತಿಳಿಸದೆನಗೆಂದ ॥
ರೋಷಹೊಂದಿಸು ನೋಡಿಕೊಳ್ಳದೆ ।
ಘಾಸಿಯಾಗುತ ಪಿತನು ಕೇಳಲು ।
ರೋಷವೇನೆನುಸುರಲಾಪ್ಪವು ನಾನು ಜನಕಂಗೆ ॥೧೦॥

ಚಿಂತಿಸುತ್ತಲಿ ಪಿತನ ಕಾಣುತ ।
ಚಿಂತೆಗಾಸರೆಯಾದ ರತ್ನವ ।
ಪಂಥವೆಲ್ಲವ ಪೇಳ್ದ ಭಯದೊಳು ಕ್ಷಮೆಯ ಬಯಸುತ್ತ ॥
ಇಂತು ಕೋರುವ ಸುತನ ಕ್ಷಮಿಸದ ।
ಸಂತ ಪಾಪವ ಗೈದೆ ಕುವರನೆ ।
ಅಂತರಾತ್ಮನ ನಾಮ ವಿಕ್ರಯದಿಂದ ಪೋಗೆಂದ ॥೧೧॥

ಎಲವೋ ಕಪಟಾಚಾರದಿಂದಲಿ ।
ಗಳಿಸಿಕೊಂಡೆಯ ಪಾಪಿ ರತ್ನವ ।
ಜಲಜನಾಭನ ನಾಮರತ್ನವ ನೀನು ವಿಕ್ರಯಿಸಿ ॥
ಹೀನ ರತ್ನವ ಕೊಂಡುಬಹರೇ ।
ನಿಲವೆ ತೊಲಗಿಲ್ಲಿಂದ ಮರುಳೇ ।
ಸಿಲುಕಲಾಪ್ಪುದೆ ನಿನಗೆ ರಾಮನ ನಾಮ ಮಧುಪಾನ ॥೧೨॥

ವಸನವಿದೆಂತಕೆ ದುಃಖಿಸೆ ಚೀಪ ।
ಕನಕವೆಂತಕೆ ನಾಶವಾಗುವ ।
ಧನವನುಡುವುದು ನಾವು ಗಳಿಸಿರೆ ರಾಮರತ್ನವನು ॥

ಧನವನಿತ್ತೊಡೆ ನಷ್ಟ ದೊರೆವುದು ।
ಕನಕವಿತ್ತೊಡೆ ಲಾಭವಿಲ್ಲವು ।
ಇನನಕುಲಜನ ನಾಮ ರತ್ನವನಿತ್ತು ಲಾಭವನು ॥೧೩॥

ಸುಲಭದಿಂದಲಿ ಪಡೆಯಬಹುದೈ ।
ಅಳಿಯಲಾರದು ಕಳೆಯಲಾರದು ।
ಸುಲಭವಾದರು ಬಹಳ ಮೌಲ್ಯವು ರಾಮರತುನಕ್ಕೆ ॥
ತೊಲಗು ತೊಲಗೈ ವಿಷ್ಣುದಾಸಗೆ ।
ಸಲಿಸಿ ಬರುವುದು ರತ್ನವಿದ ನೀ ।
ನೊಲಿದು ರಾಮನ ಜಾನಿಸುತ್ತಿರು ಹೋಗು ನೀನೆಂದ ॥೧೪॥

ದ್ವಾರಕಾಪುರಿಗೈದು ಕಮಲನು ।
ಮರಳಿ ಕೊಟ್ಟನು ವಿಷ್ಣುದಾಸಗೆ ।
ಭರದಿ ರತ್ನವನಿತ್ತು ಪುನರಾವೃತ್ತಿ ಹರುಷದಲಿ ॥
ತೊರೆದು ಚಿಂತೆಯ ಪಿತನ ಚರಣವ ।
ಸ್ಮರಿಸಿ ಸಂತರ ಪಾದಧೂಳಿಯ ।
ಧರಿಸಿ ಮುದದೊಳು ರಾಮಕೀರ್ತನ ಮಾಡುತಿರುತಿರ್ದ ॥೧೫॥

ರವಿಯು ನಿಶಿಯೊಡನಾಗ ಸಂಗ್ರಾ ।
ಮವನು ಗೈಯುತ ಪಡುವರಂಗದಿ ।
ರವಿಯು ನೂಕಿದನಾಗ ರಜನಿಯು ಪಶ್ಚಿಮಾಂಬುಧಿಗೆ ॥
ಅವಿತುಕೊಂಡವು ಪಕ್ಷಿನಿಕರವು ।
ಕವಿಯೆ ಕತ್ತಲೆ ಜಗವ ಮುಸುಕುತ ।
ಜಗದಿ ತಾರಾಜ್ಯೋತಿ ಪೊಳೆದುದು ಗಗನಮಂಡಲದಿ ॥೧೬॥

ಅಂದಿನಿರುಳಲಿ ಸಾಧುಸಂತರ ।
ವೃಂದ ನೆರೆದುದು ಘನಕಬೀರನ ।
ಮಂದಿರದಿ ಭರದಿಂದ ನಮಿಸುತ ಕುಶಲ ಕೇಳುತಲಿ ॥
ಬಂದು ಕಬಿರನು ಸಾಧುವೃಂದವ ।
ವಂದಿಸುತ್ತಲಿ ಪಸಿವುಗೊಂಡಿಹ ।
ವೃಂದಕೆಲ್ಲವ ನೀಯಲಶನವ ಯೋಚಿಸಿದನಾಗ ॥೧೭॥

ಕರೆದು ಸತಿಯಳ ಸುತಕಮಾಲನ ।
ಭರದಿ ಸಂತರಿಗೇನನೀವುದೊ ।
ಅರಿಯೆ ! ಮನೆಯೊಳಗಿಲ್ಲ ಭೋಜನಕೀಗ ಸಾಮಗ್ರಿ ॥
ಧರಣಿ ಯಮರರು ಪಸಿದು ಕುಳಿತಿರೆ ।
ಪರಮ ಭಕ್ತರಿಗೀಗ ಲೇನನು ।
ಕರೆದು ಕೊಡುವುದು ತಿಳಿಯೆನೆನ್ನುತ ಚಿಂತಿಸುತಲಿರ್ದ ॥೧೮॥

ಪಾಕಗೈಯುವ ವಸ್ತುವೆಲ್ಲವ ।
ಯುಕುತಿಯಿಂದಲಿ ತರುವೆನಾದೊಡೆ ।
ಬೇಕು ತಾತನನುಜ್ಞೆ ಬೇಡಲು ಸಿಲುಕಲಾರದೊಡೆ ॥
ಲೋಕಪೂಜ್ಯರ ಸೇವೆಯಧಿಕವು ।
ಪಾಕವಸ್ತುವ ಸಾಧು ಸೇವೆಗೆ ।
ಈ ಕಮಾಲನು ತರುವ ನೆಂದನು ಭರದಿ ಕಮಲವರ ॥೧೯॥

ಪರರು ಕೊಡುವರೆ ಬೇಡಿದೊಡೆ ಬಡ ।
ವರಿಗೆ ಧನವನು ಕರುಬುವರು ಖಲು ।
ಸಿರಿಗೆ ಮದವನು ತಾಳಿ ಮರೆಯುತ ದಾನಧರ್ಮವನು ॥
ಇರಲು ಬೇಹುದೆ ಜಗದಿ ಬಡತನ ।
ಬರಲು ಕಷ್ಟವು ಕೊಡರು ಧನವನು ।
ತೊರೆಯುತಾಸೆಯು ಮುಂಜೆ ನೀ ನಡಿಯೆಂದನಾ ಕಬಿರ ॥೨೦॥

ಧರಿಸಿ ಖಡ್ಗವ ತಾತಕಮಲರು ।
ಹರಿಯ ನುತಿಸುತ ನಮಿಸಿ ಮನದೊಳು ।
ಬರುತ ಕಂಡರು ಸೆಟ್ಟಿಯಂಗಡಿ ಯೊಂದು ವೀಧಿಯಲಿ ॥
ಕರೆದು ತಾತನ ಬಾಗಿಲೊಡೆಸುತ ।
ಭರದಿ ಪೊಕ್ಕನು ನಿಲಯದೊಳಗಾ ।
ಹರಿಯ ಭಕ್ತನು ತೆಗೆದುಕೊಟ್ಟನು ಪಾಕಸಾಧನವ ॥೨೧॥

ನೊಂದು ಮನದಿ ಕಮಾಲ ಪಾಪಕೆ ।
ಕುಂದಿ ತನ್ನಯ ಚೋರಕೃತ್ಯಕ್ಕೆ ।
ಕಂದಿಹೋದನು ಪಿತನ ನೋಡುತ ಕಂದನಿಂತೆಂದ ॥

ತಂದೆ ಸೆಟ್ಟಿಗೆ ಚೋರಕೃತ್ಯದ ।
ದಂದುಗವ ನೆರೆ ತಿಳುಹಿ ಬರುವೆನು ।
ಮುಂದೆ ಪೋಗಿರಿ ನೀವು ಜವದೊಳಗೆಂದನಾ ತರಳ ||೨೧||

ಪೇಳದಿರ್ದೊಡೆ ಚೋರಕೃತ್ಯದ ।
ವ್ಯಾಳಸುತ್ತುತ ಕಾಡುತಿರ್ಪುವು ।
ಪೇಳಿ ಬರುವೆನು ಸೆಟ್ಟಿಗೀಗಲೆ ನಿಜದಿ ಗೈವುದನು ||
ಕಾಳುಗೈದೆವು ಪಾಪ ನೀಗಲು ।
ಏಳಿಸುತ್ತಲಿ ಸಾಹುಕಾರನ ।
ಪೇಳುತೋಡುವೆ ನಾನು ತಾತನೆ ನೋಡು ನೀನೆಂದ ||೨೨||

ಸಾಧು ಸಂತರು ಹಸಿದು ಬಳಲಿರೆ ।
ಮೋದದಿಂದಲಿ ಸೆಟ್ಟಿಯೆಬ್ಬಿಸಿ ।
ಸಾಧುವೃಂದಕೆ ಪಾಕವಸ್ತುವ ಕದ್ದ ಸಂಗತಿಯ ||
ಸಾಧುಸೆಟ್ಟಿಗೆ ಪೇಳಿ ಜವದೊಳು ।
ಹಾದು ಬರ್ಪುದು ಕಂದನೆಂದನು ।
ಸಾಧುಕಬಿರನು ಸುತಗೆ ನಲವಿಂ ನೆನೆದು ರಘುವರನ ||೨೩||

ಎಲೆಲೆ ಸೆಟ್ಟಿಯೆ ಸಾಧುಸೇವೆಗೆ ।
ನಿಲಯಕೆರಗುತ ಪಾಕವಸ್ತುವ ।
ನೆಲವೊ ತೆಗೆದಿಹೆ ನೋಡು ಬಾಗಿಲು ತೆರೆದುಪೋಗಿರಲು ||
ಕಳುವ ಚೋರರು ಬರದ ತೆರದೊಳು ।
ಬಲವಮಾಡಿಕೊ ನಿನ್ನ ನಿಲಯುವ ।
ಕಳವುಗೈದಿಹೆ ನಾನು ಕಿಂಚಿದ್ವಸ್ತು ನೋಡೆಂದ ||೨೪||

ಓಡಿ ಬಂದ ಕಮಾಲನೆಬ್ಬಿಸಿ ।
ಗಾಢಸಿಪ್ರಿಯ ಗೈದ ಸೆಟ್ಟಿಯು ।
ಕೂಡಿಸಿದ ಹಣವನ್ನು ಚೋರರು ಕಳೆದ ರೀತಿಯೊಳು ||
ನೋಡಿ ಸೆಟ್ಟಿಯು ಕರೆದು ಮರೆಯಿಂ ।
ಮೋದಿಸುತಲಿ ದಾರಿಗಾಣದೆ ।
ಗಾಢನಿದ್ರೆಯೊಳಾಗ ತರಳನು ಬೀಳುತಿಡವ್ರತದಿ ||೨೫||

ಎದ್ದು ಸೆಟ್ಟಿಯು ನೋಡಿ ನಷ್ಟವ ।
ಕದ್ದ ಕಳ್ಳನ ಪಿಡಿಯಲೋಸುಗ ।
ಎದ್ದು ಬಂದನು ಕುಪಿತನಾಗುತ ಜವದೊಳೋಡುತ್ತ ॥
ಬಿದ್ದ ಕಮಲನು ದಾರಿಯರಿಯದೆ ।
ಗುದ್ದಿ ಸೆಟ್ಟಿಯು ಹಿಡಿದ ತರಳನ ।
ಸಿದ್ಧವಾಗೆಲೊ ಮರಣಕೆನ್ನುತ ಬೈದು ಕೋಪದೊಳು ॥೨೬॥

ಸುತನ ವರ್ತಕ ಪಿಡಿದು ವರಿಯುತ ।
ಹಿತವಮಾಡಲು ಬಂದ ಕಬಿರನು ।
ಕತದಿ ಕೋಪವಗೊಂಡ ಸೆಟ್ಟಿಯ ಕಂಡು ಚಿಂತಿಸಿದ ॥
ಮತಿಯುತೊರೆದೀ ಚೋರಕಾರ್ಯವ ।
ಹಿತವನರಿಯದೆ ಗೈದೆನೀಗಲು ।
ಗತಿಯಗಾಣೆನು ಕುರುಪನರಿತರೆ ಕಾರ್ಯಕೆಡುವುದಲಾ ॥೨೭॥

ಸುತನೆ ನಾನಿದಕೇನಗೈವುದು ।
ಖತಿಯುಗೊಂಡಿಹಸೀತ ವರ್ತಕ ।
ಹಿತವಪೋಲನು ಕುರುಪನರಿತರೆ ಸೆಟ್ಟಿ ಬಿಡನೆಮ್ಮಂ ॥
ಮತಿಯ ಪೇಳ್ವುದು ಸಾಧುಸಂತರು ।
ಕತದಿ ಪೋಪರು ಹದನವರಿತರೆ ।
ಮತಿಯಗಾಣೆನು ಪೇಳು ಹಿತವನು ಕಂದ ನೀನೆಂದ ॥೨೮॥

ಎನುವ ಜನಕನ ನೋಡಿ ಪೇಳಿದ ।
ನಿನುತ ತಾತನೆ ಎನ್ನ ಕೊರಳನು ।
ಮನದಿ ಶೋಕವ ತೊರೆದು ತರಿವುದು ಬೇಗ ನಿಲ್ಲದಿರೆ ॥
ಜನಕೆ ತಿಳುಹುತ ಸತ್ವ ಕಳೆಪನು ।
ಮುನಿದಸೀತನ ಬಲಕೆ ಕಾದ ।
ಲೈನಗೆ ಸಾಲದು ಶಕ್ತಿ ಕೊಯ್ಯುತ ಕೊರಳ ಹೋಗೆಂದ ॥೨೯॥

ಕುರುಪ ನರಿವನು ತಡವಮಾಡಲು ।
ಬರರು ಮುನಿಗಳು ನಮ್ಮ ನಿಲಯಕೆ ।
ಬರಿದೆ ಸತ್ವದ ಹಾನಿಯಾಗಲು ಸಾಧುಸೇವೆಯನು ॥

ತೊರೆದು ಜೀವಿಪುದೆಂತು ಧರೆಯಲಿ ।
ಬರಿದೆ ಚಿಂತಿಸದೀಗ ಶಿರವನು ।
ತರಿದು ಪೇಳದೆ ಕೊಂಡುಪೋಪುದು ತಾತನೀನೆಂದ ॥೩೦॥

ಮಗುವೆ ಭರ್ತ್ತರ ಸೇವೆಗೋಸುಗ ।
ನೀಗಲಸುವನು ಸಿದ್ಧನಾಗಿಹೆ ।
ತಾಗದಾದೆನ್ ನಾನು ನೀಚನು ತೊರೆದು ನಿನ್ನನ್ನು ॥
ನೀಗಲಾರೆನು ನಿನ್ನ ಕಂದನ ।
ನೀಗೆ ಕೈಯಿಂ ಕೊಲ್ಲಲಾರೆನು ।
ಮಾಗದಿರುತಿಹೆ ಪಣ್ಣು ಕೊಯ್ಯೆನು ತರಳ ನಾನೆಂದ ॥೩೧॥

ಪಿತನೆ ಬಿಡುಬಿಡು ಮೋಹದೇಹದಿ ।
ಹಿತವಗೈಯಲದಾರು ಶಕ್ತರು ।
ಗತಿಯ ಕಾಣಿಸು ದೇಹಮಾತ್ರಕೆ ನಿತ್ಯನಾತ್ಮನಲಾ ॥
ಮತಿಗೆ ಮಾಯವನೇಕೆ ನೀಡುವೆ ।
ಹಿತದಿ ಬಂದಿಹೆ ಸಾಧುಸೇವೆಯ ।
ನತುಳಮಹಿಮನೆ ಗೈಯ್ಯುವದೀಗಲೆ ತಂದೆ ನೀನೆಂದ ॥೩೨॥

ರಾಮಸೇವಾಕಾರ್ಯಕಾತ್ಮನ ।
ರಾಮ ಭಕ್ತರಿಗಾಗಿ ನೀಡುವೆ ।
ಪ್ರೇಮದೊರೆದೀ ನಿತ್ಯವಲ್ಲದ ಶರಿರದೊರೆಯುವೆನು ॥
ಕಾಮ ಬಿಡುಬಿಡು ಪುತ್ರನೆನ್ನೊಳು ।
ರಾಮಭಕ್ತರು ಕಾದುಕೊಂಡಿರೆ ।
ಪ್ರೇಮದಿಂದಲಿ ಕೊರಳ ತೆಗೆಯ್ಯೆ ತಂದೆ ನೀನೆಂದ ॥೩೩॥

ಪೊಗಳಲಳವೇ ನಿನ್ನ ಪುಣ್ಯವ ।
ಶಿಗಿವೆನೆಂತುಟು ಕಂದ ಕೊರಳಂ ।
ತೊಗೆದು ಮೋಹವನಕಟ ವಿಧಿಯೇ ಸಹಿಪೆ ನೆಂತಿದನು ॥
ಬಿಗಿದ ಮನದಿಂ ಗೈವೆಕಂದನೆ ।
ಪೊಗಳು ಭಜಿಸುತ ರಾಮನಾಮವ ।
ನೀಗಳೆಂದನು ಕಬಿರ ಕಂಬನಿಧಾರೆಗರೆಯುತಲಿ. ॥೩೪॥

ಕಾಯುದಾಸನು ತೊರೆದು ಜನ್ಮೊಳು ।
ಜೀಯ ಪರ್ವತವನ್ನು ಪೊತ್ತಿಯೊ ।
ಕಾಯುತಿರ್ದಾ ಶಬರಿ ಯೆಂಜಲನುಂಡು ಮೋಕ್ಷವನು ॥
ಶ್ರೀಯರಸ ನೀನಿತ್ತೆ ಮೆಚ್ಚುತ ।
ರಾಯನಾಡಿದ ನುಡಿಯ ಪೊರೆಯಲು ।
ಪ್ರೀಯದಿಂ ಪೊರವಂಟೆ ಹಳುವಕೆ ಜಗವ ರಕ್ಷಿಸಲು ॥೩೧॥

ಮಾಡಲರಿಯೆನು ನಿನ್ನ ಸ್ತುತಿಯನು ।
ನೀಡಲರಿಯೆನು ಶಬರಿಯಂದದಿ ।
ಮಾಡಲಾರೆನು ಮೌನ ಧ್ಯಾನ ಸಮಾಧಿಗಳನಿಂದು ॥
ಮಾಡಲಿಲ್ಲವು ನಿನ್ನ ದರ್ಶನ ।
ನೋಡಲಿಲ್ಲವು ನಿನ್ನ ರೂಪವ ।
ಮೂಢತನದಿಂ ಪಂಡಿತನನೊಳು ಗೈದೆ ನಪರಾಧ ॥೩೬॥

ನಿನ್ನ ಭಕ್ತರ ಚರಣಕಮಲಕೆ ।
ನನ್ನಿಯಿಂದಲಿ ನಮಿಸಲಿಲ್ಲವು ।
ಮುನ್ನ ಭೋಜನ ಕಟ್ಟ ಕೋಪಗ ಪಾಕಸವುಗೊಳಿಸೆ ॥
ಬನ್ನಮರಿಯದೆ ಬರಲುಸಿಲ್ಲಿ ದೆ ।
ರನ್ನ ಮರೆಸಿ ಪಾಪತೆಗೆಯುತ ।
ಘನ್ನ ಮೋಕ್ಷವ ನೀಡು ರಘುಪತಿ ಶರಣು ಪೊಕ್ಕಿಹೆನು ॥೩೭॥

ನಿಂದು ಚಿಂತಿಸದೀಗ ಕೊರಳನು ।
ತಂದೆ ಹಾರಿಸಿ ಕೊಂಡು ಪೋಪುದು ।
ಮುಂದೆ ಸಂತರ ಜವದ ಪೂಜಿಸಿ ಪ್ರಿಯದಿ ನೀವೆನಲು ॥
ಕಂದ ನಿನ್ನನ್ನೆಂತು ತೊರೆಯಲಿ ।
ಬಂದೆನೆಂತಕೆ ನಾನು ಧರೆಯಲಿ ।
ಕಂದ ನಿನ್ನನು ಕೊಲ್ಲಕಾರ್ಯಕೆ ಧರೆಯೊಳೀಪರಿಯು ॥೩೮॥

ಹದನಗೈದರ ಕಾಣೆ ನಕಟಾ ।
ಸದಯ ಕಂದನನೆಂತು ತೊರೆಯಲಿ ।
ಮುದದಿ ಸಲಹಿದೆ ನಿನ್ನನಮವಾ ಕೊಲುವ ಬಗೆಯೆಂತು ॥

ಸದಯ ತಾತನೆ ಕೊರಳ ಮುರಿವುದು ।
ಹದನ ಕೆಡುವುದು ಮುಂದೆ ನೀನೀ ।
ಹೃದಯಪ್ರೀತಿಯ ತೊರೆಯದಿರ್ದೊಡೆ ಕಡಿದು ತೊಲಗೆಂದ ॥೩೯॥

ಆ ಕಬೀರನು ಮನದಿ ಮರುಗುತ ।
ಲಾ ಕಮಾಲನ ಕೊರಳ ಹಾರಿಸಿ ।
ಜೋಕೆಯಿಂದಲಿ ಕೊಂಡು ನಡೆದನು ಬೇಗ ನಿಜಗೃಹಕೆ ॥
ಶೋಕಿಸುತ್ತಲಿ ಮಗನ ಮರಣಕೆ ।
ಮೂಕನಂತಿರುತಿರ್ದ ನರವರ ।
ಕಾಕುಯುಕುತಿಯ ಗೈದನೇತಕೆನುತ್ತ ಹಲುಬುತಲಿ ॥೪೦॥

ರಾಮನಂ ನೆನೆಯುತ್ತ ಮುದದೊಳ ।
ಗಾ ಮಹಾತ್ಮನ ಗುಣವ ಚಿಂತಿಸಿ ।
ಪ್ರೇಮಮೋಹವ ತೊರೆದ ಸುತನಲಿ ಕೊರಳ ಕೊಯ್ಯುವದಕೆ ॥
ಪ್ರೇಮದಿಂ ನಿಜಸತಿಯು ಬರುತಿರ ।
ಲಾ ಮಹಾತ್ಮನು ತಂದ ವಸ್ತುವ ।
ಕಾಮಿಸಿಗೆ ತಾನಿತ್ತು ಮೌನದೊಳಿದ್ದು ನೋಡುತಲಿ ॥೪೧॥

ಸಂತರಿಗೆ ಪಾಕವನು ಕೊಡುವೆನು ।
ಚಿಂತೆಯಿನ್ನೇಕೆನುತ ಯೋಚಿಸಿ ।
ನಿಂತು ನೋಡುತ ಪತಿಯ ನೀಕ್ಷಿಸಿ ನುಡಿದಳಿಂತೆಂದು ॥
ಎಂತುಟೀ ವಸ್ತುಗಳ ತಂದಿರಿ ।
ಕಾಂತ ಪೇಳೆನ್ನಾಣೆ ಕರುಣದಿ ।
ಇಂತು ಕೊಟ್ಟವರಾರು ಸುಲಭದಿ ಭಕ್ತರಿಂಗೊಲಿದು ॥೪೨॥

ಅತಿಶಯದ ಹದನವನು ಗೈದಿಹೆ ।
ಗತಿಯ ದೊರಕಿಸಿ ಸುತಗೆ ಸಗ್ಗದಿ ।
ಮಿತದಿ ತಂದೆನು ಪಾಕವಸ್ತುವ ಸಾಧುಸತ್ಕರಿಸೆ ॥
ಸತಿಯೆ ಸಂತರು ಹಸಿದು ಬಳಲಿರೆ ।
ಮತಿಯ ನರಿಯದೆ ಸುಮ್ಮನಿರ್ಪರೆ ।
ಚತುರೆ ಪಾಕವಮಾಡಿ ಬಡಿಸೌ ಪೋಗು ನೀನೆಂದ ॥೪೩॥

ಮಗನ ಕಾಣದೆ ತರಳೆ ಚಿಂತಿಸು ।
ತೊಗುವ ಪ್ರೀತಿಯ ತಾಳಲಾರದೆ ।
ಸುಗುಣಿ ಕೇಳ್ದಳು ರಮಣ ಪ್ರಿಯಸುಕುಮಾರನೆಲ್ಲಿಹನು ॥
ಮಗುವ ನೀಕ್ಷಿಸಿ ಮುದ್ದನಿಡುವೆನು ।
ಮಗುಳೆ ಬಾರದೆ ನಿಂದನೇತಕೆ ।
ಸುಗುಣಿ ಯೆಲ್ಲಿಹನೆಂದು ಮರುಗುತಲಾಗ ನಿಜಪತಿಯ ॥೪೪॥

ಸುತನ ಕಾಣದೆ ಮರುಗುತಿರುತಿಹ ।
ಸತಿಯ ದುಗುಡವ ಕಂಡು ಕೊರಗುತ ।
ಸುತನ ಮರಣವ ಪೇಳಲಾರದೆ ಮೌನದೊಳಗವನು ॥
ಹಿತವನರಿಯದೆ ಚಿಂತಿಸುತ್ತಿರೆ ।
ಪತಿಯು ತಂದಿಹ ಪಾಕವಸ್ತುವ ।
ಸತುಳ ಮುದದೊಳು ತೆಗೆಯೆ ಕಂಡಳು ರಕುತಮಯ ಶಿರವ ॥೪೫॥

ಕಾಂತ ಪೇಳೀ ಘೋರನೋಟವ ।
ನೆಂತು ಕಂಡೆಸಿಸೇಕೆ ರಕುತವು ।
ಶಾಂತಕಮಲನ ಶಿರವು ರಕುತದಿ ತೊಳೆದ ಬಗೆಯೆಂತು ॥
ಕಾಂತೆ ಕೇಳಾ ಸುತನ ಕೊರಳನು ।
ಸಂತರಾದಿಯ ಸೇವೆಗೋಸುಗ ।
ಲಿಂತು ಛೇದಿಸಿ ತಂದೆ ನಾ ನೋಡೆಂದ ಕವಿವೀರ ॥೪೬॥

ಚೋರವೃತ್ತಿಯೊಳಾನು ಕುವರನ ।
ಚೋರಕೃತ್ಯಕೆ ಕಳುಹಿ ವಸ್ತುವ ।
ಚೋರತನದಿಂ ಕೊಂಡು ತರುತಿರೆ ಶ್ರೇಷ್ಠಿ ತಾ ಬರುತ ॥
ಧೀರಕುವರನ ಪಿಡಿದು ಬಾಧಿಸ ।
ಲಾರಿದೆಂಬುದ ನರಿವನೆನ್ನುತ ।
ಮಾರರೂಪನ ಕೊರಳ ತರಿದೆನು ನಾನು ನೋಡೆಂದ ॥೪೭॥

ಸುತನ ಶಿರವನು ಕಂಡು ತರಳೆಯು ।
ಹಿತದಿ ಕೈಯೊಳು ಕೊಂಡು ಪದುಳದಿ ।
ಮತಿಯಕಾಣದೆ ಧರೆಯೊಳುರುಳಿದಳವಳು ದುಃಖದಲಿ ॥

ಸುತನ ನೆನೆಯುತ ಮುಖವ ಮುದ್ದಿಸಿ ।
ಪತಿಯು ನೋಡುತ ಕರೆದು ಕಂಬನಿ ।
ಖತಿಯ ಮನದಲಿ ನೊಂದು ಹೆಮ್ಮ್ರೈಸಿದಳು ಮೂರ್ಛೆಯಲಿ ॥೪೮॥

ಅವನಿತೆ ತಿಳಿದೆದ್ದು ಬಳಲುತ ।
ಜೀವಸುತನಂ ರಮಣ ನೀನೆಂ ।
ತೋವಿ ಕೊಂದಿರಿ ಕರುಣವಿಲ್ಲವೆ ತರಳನಲಿ ನಿನಗೆ ॥
ತೀವಿದೆಳನಗೆಯಿಂದ ನುಡಿಸುವ ।
ನೀ ವಿಮಲ ಬಾಲಕನ ಕೊರಳನ ।
ದಾವ ಭಾವನೆಯಿಂದ ಮುರಿದಿಹಿರೆಂದಳಾ ತರುಣಿ ॥೪೯॥

ಹೇಗೆ ಸಹಿಸಿದೆ ತಾಳೆ ನೋವನು ।
ತಾಗಿದಸಿಯುಲುಗನ್ನು ಕಂದನೆ ।
ಹೇಗೆ ತಡೆದೆಯೋ! ಹರಹರಾ! ಕಡುಪಾಪಿ ನಾನಾದೆ ॥
ಹೇಗೆ ಜೀವಿಸಲಿನ್ನು ಧರೆಯೊಳು ।
ನೀಗಿ ನಿನ್ನನು ಮುದ್ದುಕಂದನೆ ।
ಸಾಗಿ ಬರುವೆನು ನಾನು ನಿನ್ನೆಡೆಗೀಗ? ಹಾ! ಕಂದ ॥೫೦॥

ಬಿಟ್ಟ ಕಂಗಳ ಮುರಿದ ಮೀಸೆಯ ।
ನಿಟ್ಟ ತಿಲುಕದ ಪಳೆಯ ಸೊಬಗಿನ ।
ಬಿಟ್ಟ ವ[illegible]ನ ಸುರಿವ ರಕುತದಿ ತೋಳೆದ ಮುಂಗುರುಳ ।
ಶಿಟ್ಟು ತೋರುವ ತೆರೆದ ಬಾಯನು ।
ಬಿಟ್ಟು ಕಾಣುವ ರದನ ಪಂಕ್ತಿಯು ।
ದಿಟ್ಟ ಕುವರನ ಮುಖವ ನೋಡುತ ಹೊರಳಿದಳು ತರಳೆ ॥೫೧॥

ಆವುದೇ ಮೃತಿ ಕುವರಗಕಟಾ ।
ಹೋದುದೇ ಸರ್ವಸ್ವವೆನ್ನದು ।
ನೀದುದೆನ್ನೆದೆ ಕಾಲನೊಯ್ದನೆ! ಸುತನ! ಭಕ್ತನನು ।
ನಾಥಗಳ ನುಪಚರಿಸಿ ಪೊಂದಿರಿ ।
ಸಾಧು ಗುಣವನು ರಮಣ ನೀವೀ ।
ಬಾಧೆಯನು ಕೊಡಲೆಂತು ಬಂದುದು ಮನವು ನಿಮಗಿದಕೆ ॥೫೨॥

ಕೃಪಿತಕೀಮತಿ ನಿಮಗೆ ಕೆಟ್ಟುದು ।
ಸೋಹುವೇತಕೆ ನಿಮ್ಮ ಶಾಂತಿಯು ।
ಪೂತುಪೇ ಕಾಠಿಣ್ಯ ನಿಮ್ಮಯ ಕರುಣ ಹೃದಯದೊಳು ॥
ಈ ತಪೋಸಿದ್ಧಿ ನಿರಪರಾಧಿಯು ।
ಸೋತುಹೋಯಿತೆ ನಿಮ್ಮ ಜಾಣ್ಮೆಯು ।
ಮಾತಪೇತಕೆ ಕೊಡುವೆ ನಸುವನು ನಿಮ್ಮ ಪಸತಳದಿ ॥೨೩॥

ಬಲುಬಳಲಿ ಬೆಂಡಾಗುತಳಲುವ ।
ಲಲನೆ ದುಃಖವನೋಡಿ ಕರುಣದೊ ।
ಳಳಲು ಕಾಮಿಸಿ ರಾಮನಾಮವ ಜಾನಿಸುತ ಮುದದೆ ॥
ಲಲನೆಯಳುತಿರೆ ಸಾಧುಗಳು ನೆರೆ ।
ಪುಳುಕಿ ತರಳನ ಮರಣವಾರ್ತೆಯ ।
ತಿಳಿವರಾಮೊದೆ ನಿಲದೆ ಸ್ಫೋಂಪರಿಸುತ್ತ ನಿಜಸಾಗೆ ॥೨೪॥

ಲಲನೆ ಬಿಡುಬಿಡು ನಿನ್ನ ಶೋಕವ ।
ಅಳಿವು ಸೇರದು ಸುತಕಮೂಲಗೆ ।
ಅಳಿವುದಾರಿಗೆ ನಿತ್ಯವಲ್ಲದೆ ದೇಹಕಲ್ಲದಲೆ ॥
ಅಳಿವುಬಾರದು ಜೀವನಿದಕೆಲೆ ।
ತಿಳಿದುನೋಡೌ ಜೀವ ನಿತ ನ ।
ಮುಳಿದು ಕೊಲ್ಲುವದುಂಟೆ ಜೀವನ ನೋಡು ನೀನೆಂದ ॥೨೫॥

ಜೀವನೆಂಬುದು ಮರಣವಿಲ್ಲದ ।
ದೇವತಾಂಶನ ತಿಳಿಯು ನಾನಿ ।
ನ್ಯಾವ ಬಾಂಧವ್ಯಗಳ ಕಾಣೆವು ನೋಡೆ ಧರೆಯೊಳಗೆ ॥
ಪಾವನಳಿ ಕೊಲಬಲ್ಲನೆಂ ನರ ।
ಭಾವಿಸಲು ಜೀವನನು ನಿನ್ನಯ ।
ಭಾವನೆಯು ತಪ್ಪಿಸಿಸಲ್ಲವೆಂ ಸತಿ ನೋಡು ನೀನೆಂದ ॥೨೬॥

ಜನನ ಮರಣಾವಳಿಯು ಜೀವನ ।
ನಿಸಿತು ಬಾಧಿಸಲಾರದೌ ಸತಿ ।
ಜನನ ಮರಣಾದಿಗಳು ದೇಹಕೆ ಕೂಡಿ ಬರುತಿಹವು ॥

ಇನಿತು ಪಂಕಿಸಿ ನೋಡಲಾತ್ಮನು ।
ಅನಘ ಸಿರಿಪರಮಾತ್ಮನಂಶವೆ ।
ಮನದಿ ಸಂಶಯಬೇಡ ಜೀವನೆ ಪರಮಪಾವನನು ||೫೭||

ನಿತ್ಯನಿರ್ಮಲ ನಿತ್ಯತೃಪ್ತನು ।
ನಿತ್ಯಪೂಜ್ಯನು ಸುಗುಣಚರಿತನು ।
ನಿತ್ಯರೂಪನು ನಿರ್ವಿಕಲ್ಪನು ಮಿಗೆ ನಿರಾಕಾರ ॥
ಅತ್ಯಧಿಕ ಗುಣಪೂರ್ಣ ನಿರ್ಗುಣ ।
ನಿತ್ಯಮಾನಂದಧಿಕ ನತಿಶಯು ।
ಸತ್ಯಪೂರ್ಣನು ನಿಗಮವಿನುತನು ಜೀವನೇ ನಿತ್ಯ ||೫೮||

ಇವನಿಗಿಲ್ಲಾ ಹಸಿವು ತೃಷೆಗಳು ।
ಇವನಿಗಿಲ್ಲಾ ಜನನ ಮರಣವು ।
ಇವನಿಗಿಲ್ಲಲೆ ದುಃಖ ಸಂತೋಷಾತಿಶಯ ಕೇಳೆ ॥
ಇವನಿಗಿಲ್ಲಾ ಮುಪ್ಪು ಜವ್ವನ ।
ಇವನಿಗಿಲ್ಲಲೆ ಲಿಂಗಭೇದವು ।
ಇವನೆ ನಿತ್ಯನು ದಿತ್ಯಪೂರ್ಣನು ಆತ್ಮ ಪರಮಾತ್ಮ ||೫೯||

ನಿತ್ಯನಾದುದರಿಂದ ಜೀವನ ।
ಮೃತ್ಯು ಸೋಂಕನು ರೋಗಬಾಧೆಯು ।
ಸತ್ಯದಿಂದಲಿ ತುಡುಕಲಾರದು ಕೇಳು ಸುಂದರಬೀ ॥
ನಿತ್ಯವಲ್ಲದ ದೇಹವನು ಸಲೆ ।
ನಿತ್ಯವೆನ್ನುತ ಮಾಯುಜಾಲದಿ ।
ಮಿಥ್ಯಾವಾದೀ ಕರ್ಮಮಾರ್ಗದಿ ಬಿದ್ದು ಹೊರಳುವುದು ||೬೦||

ಧನ್ಯನೀಸುತ ರಾಮಭಕ್ತರ ।
ಉನ್ನತಾಮಲಸೇವೆಗೋಸುಗ ।
ತನ್ನ ದೇಹವನಿತ್ತು ಪೊಂದಿದ ದಿವ್ಯ ಮೋಕ್ಷವನು ॥
ಗನ್ನಕತಕದ ಮಾತದೇತಕೆ ।
ಇನ್ನು ಯೋಚನೆಬೇಡ ಬಿಡುಬಿಡು ।
ಸನ್ನುತಾಂಗಿಯೆ ಸಾಧುಸೇವೆಯು ಮಾಡು ಹೋಗೆಂದು ||೬೧||

ಮರುಳೆ ಬಿಡುಬಿಡು ನಿನ್ನ ಶೋಕವ ।
ಮರಳಿ ಕಂಬನಿಗರೆವೆ ಯೇತಕೆ ? ।
ನಿರುಕಿಸೀಗಳೆ ನಿನ್ನ ಮನದೊಳಗಾತ್ಮರೂಪವನು ॥
ಪರಮ ಹರುಷವ ಪೊಂದಿ ತೋಷಿಪೆ ।
ತರುಣಿ ನೀ ಬಾರಿಲ್ಲಿ ಕುಳ್ಳಿರು ।
ಪರಮಪುರುಷನ ಧ್ಯಾನದಿಂದಲಿ ಮನವ ನಿಲಿಸೆಂದ ॥೬೨॥

ರಾಮನಾಮವ ಜಪಿಸಿ ಪ್ರೇಮದಿ ।
ಭಾಮೆ ಮರೆತಳು ಜಗದ ಮರುಳನು ।
ಆ ಮಹಾನಿಧಿಯಂಘ್ರಿಯುಗಳದಿ ಮನವ ನರ್ಪಿಸುತ ॥
ಆ ಮನೋರಮೆ ಶೀಘ್ರದಲ್ಲಿಯೆ ।
ಕಾಮಮೋಹಾದಿಗಳ ತೊರೆಯುತ ।
ಈ ಮಹೀತಲ ನಿತ್ಯವಲ್ಲವಿದೆಂದು ತಿಳಿದಾಗ ॥೬೩॥

ಸುತನೊಳಿಟ್ಟಿಹ ಪ್ರೇಮರಾಶಿಯ ।
ಸತುಳ ವೈರಾಗ್ಯದೊಳು ತೊಳೆದಳು ।
ಸುತನ ಶಿರವನು ಕೊಂಡು ಗಂಗೆಯ ಜಲದೊಳೆಸೆದವಳು ॥
ಪತಿಯು ಕ್ಷಮೆಯನು ಬೇಡಿ ಸಂತರ ।
ಸತಿಶಯದಿ ಸೇವೆಯನು ಮಾಡಿದ ।
ಜತಿಹಿತದಿ ರಘುವರನ ನಾಮವ ಪಾಡಿ ಕೊಂಡಾಡಿ ॥೬೪॥

ಇತ್ತಲಾ ವರ್ತಕನು ಕಮಲನ ।
ಪತ್ತ್ಯ ದೇಹವ ಕೊಂಡು ರಾಜಗೆ ।
ಬಿತ್ತರಿಸಿದನು ರಾತ್ರಿ ಘಟಿಸಿದ ಚೋರಕೃತ್ಯವನು ॥
ಪತ್ತ್ಯ ದೇಹದಿ ಶಿರವ ಕಾಣವೆ ।
ಸುತ್ತನಾಗಿಹೆ ರಾಜನಾಗಳೆ ।
ಪತ್ತ್ಯ ಶರಿರವ ಶೂಲಕೇರಿಸುವಂತೆ ನಿಯಮಿಸಿದ ॥೬೫॥

ದೊರೆಯ ನುಡಿಯನು ಕೇಳಿ ದೂತರು ।
ತ್ವರದಿ ಶೂಲಕೆ ದೇಹವೇರಿಸು ।
ತಿರಲು ಸಂತರು ಬರುತ ನೋಡಿದರಾ ವಿಚಿತ್ರವನು ॥

ಕರವ ಮುಗಿದುದು ಸಾಧುವೃಂದಕೆ ।
ಭರದಿ ದೇಹವು ಭಕ್ತಿಯಿಂದಲಿ ।
ಪರಮದಚ್ಚರಿಗೊಂಡು ಸಂತರು ನಿಂದು ನೋಡಿದರು ||೬೬||

ಶಿರರಹಿತ ದೇಹವನು ಮುದದೊಳು ।
ಕರಯುಗಳ ಜೋಡಿಸುತ ನಮಿಸಲು ।
ಪರಮದಚ್ಚರಿಗೊಂಡು ಸಂತರು ಕೇಳಿದರು ಹವನ ||
ವರಕಬೀರನು ಸುರಿಸಿ ಕಂಬನಿ ।
ಬರುವ ದುಃಖವ ತಡೆದು ಪೇಳಿದ ।
ಪರಮಭಕುತ ಕಮಾಲ ಕೃತ್ಯವ ಪ್ರಿಯದಿ ಸಂತರಿಗೆ ||೬೭||

ಸುತಕಮಾಲನ ಕೊರಳ ಸೀಳಿದ ।
ಹತಿಯ ನುಸುರಲು ಕೇಳಿ ಸಾಧುಗ ।
ಳತಿಹಿತವ ತಾವುತ್ತ ಮನದಲಿ ಶಿರವ ತೋರೆನಲು ||
ಸುತನ ತಲೆಯನು ನಿನುತ ಗಂಗಾ ।
ಮಾತೆಯುದರದಿ ಬಿಸುಟೆನೆಂದಳು ।
ಮಾತೆ ಸುಂದರಬೀಬಿ ದುಃಖಿಸಿ ಕರೆದು ಕಂಬನಿಯ ||೬೮||

ತಾಯೆ ಪ್ರಾರ್ಥಿಸು ಮಾತೆ ಗಂಗೆಯ ।
ತಾಯಿ ಕೊಡುವಳು ಮಗನ ಶಿರವನು ।
ತಾಯೆ ನಿನ್ನಯ ಮೊರೆಯ ಕೇಳಲು ಬೇಗ [illegible] ||
ಆಯುತಾನ್ವಯ ಭಕ್ತಿಯಿಂದಲಿ ।
೩೦ ಪ್ರಾಯಮರೆಯುತ ತುತಿಸಿದಳು ನೆರೆ ।
ಮಾಯರೂಪಿಣಿ ನಗದಿ ಗಂಗಾ ದೇವಿಯನ್ನಿಂತು ||೬೯||

ಮಾತೆ ಶ್ರೀಹರಿಜಾತೆ ನಿರುಪಮ ।
ಖ್ಯಾತೆ ನತಜನಪ್ರೀತೆ ಪಾವನ ।
ನೀತೆ ಜಗದ್ವಿಖ್ಯಾತೆ ನಾರದಗೀತೆ ಸುರವಿನುತೆ ||
ಸಿಂತೆ ಪಾಪವಿನಾಶೆ ಬುಧಜನ ।
ಪ್ರೀತೆ [illegible] ಗುಣಾನ್ವಿತೆ ।
ಜ್ಯೋತಿ [illegible] ||೭೦||

ತಾಯಿ ಗಂಗಾದೇವಿ ಬೇಡುವೆ ।
ನಾಯಿತಾಂಬಕಿ ಸುತನ ಶಿರವನು ।
ಮಾಯರೂಪಿಣಿ ದಯದಿ ನೀಡೌ ಬಾಗಿ ನಮಿಸುವೆನು ॥
ರಾಯ ಶಂತನಸತಿಯೆ ಬಲು ರಮ ।
ಣೀಯ ಗುಣಮಣಿ ಸುತನ ವಿರಹದಿ ।
ನೋಯ ನೊಂದಿಹೆ ತಾಯೆ ಜಾಹ್ನವಿ ನೀಡು ಕರುಣವೊಳು ॥೭೧॥

ಅಂದು ಸಂತರ ಸೇವೆಗಾಗಿಯೆ ।
ಕಂದ ನಿತ್ತನು ತನ್ನ ಕೊರಳನು ।
ಬಂದು ಕಾಂತನು ತೋರೆ ಶಿರವನು ಬಿಸುಟೆ ತವ ಜಲದಿ ॥
ಇಂದು ಸಂತರು ಸುತನ ದೇಹವ ।
ಸಿಂದು ನಮಿಪುದ ಕಂಡು ಶಿರವನು ।
ತಂದು ತೋರಿಸೆ ಬಂದೆ ನಿನ್ನಡಿ ಬೇಡಿ ಹರನಾರಿ ॥೭೨॥

ಇಂತು ಸುಂದರಬೀಬಿ ಗಂಗೆಯ ।
ನಿಂತು ನುತಿಸಲು ಮೆಚ್ಚಿ ಭಕುತಿಗ ।
ನಂತರೂಪಿಣಿ ತಲೆಯ ತೇಲಿಸಿ ತೋರಿದಳು ಜಲದಿ ॥
ಚಿಂತೆ ದೊರೆಯುತ ಕೊಂಡು ಶಿರವನು ।
ಸಂತಸ್ಯಂದಕೆ ತೋರೆ ಭರದೊಳು ।
ಅಂತರಾತ್ಮನ ಜಾಸಿಸುತ್ತಲಿ ಪೇಕದೊಡಸಿಡಲು ॥೭೩॥

ಜೀವ ಬಂದುದು ಸುತಕಮಾಲಗೆ ।
ಪಾವನನು ಬಲು ಭಕುತಿಯಿಂ ರಾ ।
ಜೀವ ಪದಗಳಿಗೆರಗಿ ಬಿದ್ದನು ಮನ್ನಣೆಯ ಬೇಡಿ ॥
ಆವಗಂ ಹರಿ ಸಲಹಲೆಂದುರೆ ।
ತೀವಿದತಿ ಮುದದಿಂದ ಪರಸುತ ।
ಪಾವನಾತ್ಮ ಕಬೀರಗೆರಗುತ ಸಾಧುಗಳು ತೆರಳೆ ॥೭೪॥

ನೋಡಿ ಸುತನನ್ನಪ್ಪಿ ಬಲು ಕೊಂ ।
ಡಾಡಿ ಮಹಿಮೆಯ ಸತಿಪತಿಯು ರೋ ।
ಲಾಡಿ ನಲಿದರು ಸಿರಿರಘುಪತಿಯ ಭಜಿಸುತಲಿ ಮುದದಿ ॥

ನೀಡಿದನೆ ಮಗನಸುವ ರಘುವರ ।
ನೋಡಿಬರುತಲಿ ಕರುಣಿ ಬಡರೊಡ ।
ನಾಡಿ ಜೀವವನಿತ್ತು ಸಲಹಿದ ಶರಣರಕ್ಷಕನು ॥೭೫॥

ರಾಮ ರಾಕ್ಷಸಭೀಮ ರಘುಕುಲ ।
ಸೋಮ ಪಾವನನಾಮ ಮಂಗಳ ।
ಧಾಮ ಮುನಿಜನಪ್ರೇಮ ಪಾಪವಿರಾಮ ನಿಸ್ಸೀಮ ॥
ಮಾಮನೋಹರರಾಮ ಕವಿಜನ ।
ಕಾಮ ನೃಪತಿಲಲಾಮ ಮೇಘ ।
ಶ್ಯಾಮ ಸೂನೃತನೇಮ ಭಜಿತಸುಧಾಮ ಶ್ರೀರಾಮ ॥೭೬॥

ಎಂದು ಪರಿಪರಿಯಿಂದ ರವಿಕುಲ ।
ನಂದನನ ನಾಮವನು ನೆನೆಯುತ ।
ಬಂದ ಸಂತರ ಬೀಳುಕೊಟ್ಟರು ಹರುಷಗೊಳ್ಳುತಲಿ ॥
ಚಂದದಿಂದಲಿ ಸತಿಕುಮಾರಕ ।
ರಿಂದ ಕೂಡಿ ಕಬೀರ ಕುಣಿದನು ।
ಅಂದು ಭಜಿಸುತ ರಾಮವಿಠ್ಠಲನಂಘ್ರಿಕಮಲವನು ॥೭೭॥

ಸಂಧಿ ೨ ಪದ್ಯ ೧೬೩ ಕ್ಕೆ ಮಂಗಳಮಸ್ತು.



## ಮೂರನೆಯ ಸಂಧಿ.

ಸೂ|| ಒಲಿದು ಮುಕುತಿಯ ಪೊಂದಲೋಸುಗ |
ಒಲಿಸಿ ರಾಮಾನಂದಗುರುವನು |
ಗೆಲಿದ ಮಮತೆಯ ವರಕಬೀರನು ಜಗದ ಮರುಳನ್ನು ||

ಇಂತು ದಿನಗಳಮೇಲೆ ದಿನಗಳು |
ಪಿಂತೆ ತೆರಳಲು ಸಾಧು ಕಬಿರನು |
ಕಂತುಜನಕನ ನೋಡಿ ತಣಿಯಲು ಮನದೊಳಿಚ್ಛೈಯಲಿ ||
ಅಂತರಾತುಮ ನಂಘ್ರಿಭಜನೆಯ |
ದೆಂತು ಗೈವುದೊ ? ರಾಮನಾಮವ |
ನೆಂತು ಗುರುಮುಖದಿಂದ ಪೊಂದುವುದೆಂದು ಚಿಂತಿಸಿದ ||೧||

ದಿನದಿನದ ಪಾಪಗಳು ಬೆಳೆಯುತ |
ಜನನ ಮರಣಾದಿಗಳ ಕೂಪದಿ |
ಧನಕನಕದಾಸೆಯನು ಪೆರ್ಚಿಸಿ ಮರುಳುಗೊಳಿಸುವುವು ||
ಘನತರದ ಸಂಸಾರಪಾಶದಿ |
ಮನವ ಕಟ್ಟುತ ಹೊಲಸು ಕರ್ಮದಿ |
ಕುಣಿಸಿ ಮಾಯುವ ನೆರಚಿ ಮತಿಯನು ಮಂದಗೊಳಿಸುವುದು ||೨||

ಮಾಡಿ ಕನಕದೊಳೆಸೆವ ಪ್ರತಿಮೆಯ |
ಬೇಡದಾಗಲು ಕಾಸಿ ಕರಗಿಸಿ |
ಮಾಡಿ ನೂತನ ಬೊಂಬೆಯೊಂದನು ಪುನಃ ಕರಗಿಸುತ ||
ಮಾಡಿಮಾಡುತ ನವನವೀನದ '
ಗೂಢಪ್ರತಿಮೆಯ ನೆಸೆವ ತೆರದೊಳು |
ಮೂಢತನದಿಂ ಚಿತ್ರತರದೊಳು ಭಕ್ತಿದೊರೆಯುತಲಿ ||೩||

ಕೊಟ್ಟು ದೇಹವ ಜೀವವಿರಿಸುತ |
ಕೆಟ್ಟ ಜೀವನದೊಳಗೆ ಮುಳುಗಿಸಿ |
ಮುಟ್ಟುವಿಾರಲು ತೆಗೆದು ಜೀವವ ನವಶರೀರದೊಳು ||

ಇಟ್ಟು ಕಳುಹುವ ಧರೆಗೆ ಮಾಯದ ।
ಕಟ್ಟಿನಲಿ ಸೆರೆ ಕಟ್ಟಿ ಜೀವವ ।
ಮೆಟ್ಟಿ ಕೆಗೆಯುತ ಮತ್ತೆ ಕಳುಹುವ ದೇಹವಿತ್ತೊಂದ ॥೪॥

ಈತೆರದಿ ಬಹುಪರಿಯ ದೇಹವ ।
ನೀತ ಜೀವನು ಪೊಂದುವನು ಧರೆ ।
ಗೀತ ಜೀವಸ್ಮಾತ್ರನೊಬ್ಬನು ಸಕಲ ದೇಹದೊಳು ॥
ಈ ತನುವು ಸಲೆ ನಾಶಪೊಂದುತ ।
ಭ್ರಾಂತಿಗೊಳಿಸುವ ಜನನಮರಣ ।
ವ್ರಾತದೊಳು ಸೆರೆ ನರಳುತಿರ್ಪನು ಕರ್ಮಮಯ ಜಗದಿ ॥೫॥

ನಿತ್ಯನಾತ್ಮನು ಜೀವನಿವನೇ ।
ನಿತ್ಯಪೂಜ್ಯನು ನಿತ್ಯತೃಪ್ತನು ।
ನಿತ್ಯಮಾನ್ಯನು ಸಿಲುಕಿ ದೇಹದ ಮಾಯುಮೊಳು ಮುಳುಗಿ ॥
ಅತ್ಯಧಿಕ ಸಂಕಟದಿ ನರಳುತ ।
ಚಿತ್ತಶುದ್ಧಿಯ ಮರೆತು ತನ್ನನು ।
ಕೆತ್ತು ತೆರವಾಗಿರಿಸಿ ದೇಹಕೆ ಮರುಳ ತಾನಾಗಿ ॥೬॥

ಇಂತು ಪಾಪದ ಕೂಪಮೊಳಗ ।
ತ್ಯಂತ ಕಷ್ಟದಿ ಸಿಲುಕಿ ನೆರವುತ ।
ಅಂತರಾತುಮನನ್ನು ಮರೆತಿಹ ನಾತ್ಮಸಿದ್ಧು ತಿಳಿಯೆ ॥
ಎಂತು ಕಾರ್ಯವನೆಸಗಿ ತಿಳಿವುದು ।
ಎಂತು ತನ್ನನು ತಾನು ತಿಳಿವುದು ।
ಎಂತುಟರಿಯುಲು ಜಯಿಸಿ ಮನವನು ಸೆರೆಯ ಬಿಡಿಸುವುದು ॥೭॥

ಅಹಿತರಾರನುಗೆಲಿದು ಮನವನು ।
ಅಹಿತಮನನಲಿ ಸಿಲಿಸಿ ಸಾವ್ದ ।
ಅಹರಹಂ ಜಪಗೈದು ತೊರೆಯುತ ಮಮತೆಯನು ಜಗದೆ ॥
ಕುಹಕಕೃತ್ಯವರ ಬಿಟ್ಟು ಬಲುವುದ ।
ವಹಿಸುತಾತ್ಮನ ನರಸಿ ತಿಳಿವುದು ।
ಸಹನಶೀಲದಿ ಮತ್ತೆ ಪಾಶವನೆಲ್ಲ ಬಾಧಿಪುದು ॥೮॥

ಕಡೆದು ನವನೀತವನು ದಧಿಯೊಳು ।
ಬಿಡಲು ಸೇರದೆ ತೇಲುತಿರ್ಪುದು ।
ಜಿಡಗ ತೊರೆಯುತ ಮನವ ಜಯಿಸಿಹ ನಿಜವ ನರಿತಿರುವ ॥
ಮೃಡಸಖನ ನೊಲಿಸಿರುವ ಮನುಜನು ।
ಪಡನು ಕಷ್ಟವ ಭವಶರಧಿಯಲಿ ।
ಕೆಡನು ಧರೆಯೊಳು ಜನನಮರಣದ ಯೋನಿಯೊಳು ಸಿಲ್ಕಿ ॥೯॥

ತನ್ನ ತಾ ನರಿತವನು ಮರಳುತೆ ।
ಭಿನ್ನದೇಹವ ಪಡೆವನಿಲ್ಲವು ।
ಬನ್ನಪಡಿಸುವ ಜನನಮರಣವು ಸೋಂಕಲಾರದಲಾ ॥
ಉನ್ನತಾನುಪ ಮೋಕ್ಷಪದವಿಯು ।
ಘನ್ನ ಪಡೆವನು ರಾಮರಾಜ್ಯದಿ ।
ರನ್ನಮೂರುತಿಯಲ್ಲಿ ಬೆರೆಯುತ ಲೀನನಾಗುವನು ॥೧೦॥

ಗುರುವರನ ನಾಶ್ರಯಿಸಿ ಮೋಕ್ಷಕೆ ।
ಉರುತರದ ಮಾರ್ಗವನು ಕಲ್ಪಿಸಿ ।
ಪರಮಪದವಿಯ ಪಡೆಯಬೇಕುದು ಗುರುವನುಗ್ರಹದಿ ॥
ಸಿರಿಪತಿಯ ಚರಣಾರವಿಂದದ ।
ನಿರುತ ಸೇವೆಯ ಗೈವ ರೀತಿಯ ।
ವರದ ರಾಮಾನಂದ ಗುರುವಿನ ಮುಖದಿ ತಿಳಿ ದಿಲ್ಕೆ ॥೧೧॥

ಸತತ ರಘುವರ ದಂಘ್ರಿಯುಗಳವ ।
ನುತಿಸಿ ಸುಖಿಸುವ ಗುರುವ ನಂಬಿದೆ ।
ನಿತರ ಜನಗಳ ಮಾತದೇತಕೆ ಪೋಗಿ ಶರಣೆಂಬೆ ॥
ಸತತ ರಘುಪತಿ ಗುಣವ ನುತಿಸುವ ।
ನತುಳನುತಿಯನು ಸೇರಿ ನಲಿಯುವೆ ।
ಗತಿಯ ಪಡೆಯುವೆ ಗುರುವ ನೊಲಿಸುವೆನೆಂದ ಕವಿವೀರ ॥೧೨॥

ಧನ್ಯ ನಾನೇ ಜಗದಿ ಸದ್ಗುರು ।
ವನ್ನು ಪೊಂದುವೆ ಮುಕುತಿಯೈದುವೆ ।
ನಿನ್ನು ಸಂದಿತು ಮೋಕ್ಷರಾಜ್ಯವು ಫಲಿಸೆ ಛಲಭಾವು ॥

ಧನ್ಯನಾದೆನು ರಾಘವೇಂದ್ರನ ।
ಘನ್ನ ನಾಮದ ರಸವ ಹೀರುವೆ ।
ನಿನ್ನ ಗುರುವಿನಮುಖದಿ ತಿಳಿಯುವೆ ರಾಮಮಹಿಮೆಯನು ||೧೩||

ರಾಮತಾರಕಮಂತ್ರ ಜಪಿಸುವೆ ।
ನಾ ಮಹಾನಿಧಿಯಂಘ್ರಿತಲದೊಳು ।
ರಾಮನಾಮದ ಬಲುಮೆಯನ್ನರೆ ತಿಳಿವೆ ಸುಲಭದೊಳು ||
ಪ್ರೇಮಿ ರಾಮಾನಂದ ನಘಯುವ ।
ನೇಮದಿಂದಲಿ ಬೇಡಿ ಪಾದವ ।
ಕಾಮಿಸುತ್ತಲಿ ಪೂಜಿಸುವೆ ನಾನೀಗ ಮುದದಿಂದ ||೧೪||

ಎಂದು ಮಹದಾನಂದದಿಂದಲಿ ।
ಬಂದು ಪೊಕ್ಕನು ಗುರುವಿನಾಶ್ರಮ ।
ದಿಂದ ಕಬಿರನು ದೂರದಿಂದಲಿ ನಮಿಸಿದನು ಬರವಿ ||
ಚಂದದಿಂದಲಿ ತೊಳಗಿ ಬೆಳಗುವ ।
ಸುಂದರಾಂಗವ ಕಂಡು ಹಿಗ್ಗುತ ।
ನಿಂದು ಬೇಡಿದ ನಘಯುವನ್ನರೆ ಗುರುವಿನಡಿಯುಲ್ಲ ||೧೫||

ಮನದೊಳಾತುರಗೊಂಡು ಕಬಿರನು ।
ಅನಘ ರಾಮಾನಂದ ಚರಣನ ।
ನೆನೆದು ನೋಡದಿ ನಿಂದು ನೋಡುತಲಾ ಮಹಾತ್ಮನನು ||
ವಿನುತ ರಾಮಾನಂದನ ಶಿಷ್ಯನ ।
ನನುನಯದಿ ನೋಡುತ್ತ ನಮಿಸಿದ ।
ನಿನದುಟದಿಂದಲಿ ಕರವ ಜೋಡಿಸಿ ಬೇಡುತಘದುವವನು ||೧೬||

ಬೀರುತಿಹುದಾ ಜ್ಯೋತಿ ವದನದಿ ।
ತೋರುತಲಿ ತೋಷವನ್ನು ಮುಖದೊಳು ।
ಸಾರಸಾಕ್ಷನ ನಾಮಮಹಿಮೆಯ ಪೊಳೆವ ಭಕ್ತಿಮುಖ ||
ಬೀರುತಿಹುದಾ ತೇಜ ವ್ರಕ್ಷ್ಯತ ।
ತೋರುತಿಹುದಾ ನಾಮಮಹಿಮೆಯ ।
ಸಾರುತಲಿ ಸಿರಿರಾಮನಾಮವ ಜಗದಿ ಪದುಳದಲಿ ||೧೭||

ವಿನುತ ಕಬಿರನು ಭಕುತಿಯಿಂದಲಿ ।
ಮನದಿ ಕಾತರಗೊಂಡು ಬಿದ್ದನು ।
ಅನಘ ರಾಮಾನಂದ ಚರಣದಿ ಬೇಡಿ ಕರುಣವನು ॥
ವಿನಯದಿಂದಲಿ ನಮಿಸಿದಾತನ ।
ಮನವ ನರಿಯುತ ವಿದಿತ ಯತಿವರ ।
ಸನಿಯಕೆಳೆಯುತ ಹದನ ವೇನೆನೆ ಕಬಿರನಿಂತೆಂದ ॥೧೮॥

ಗುರುವೆ ನಿಮ್ಮಡಿಗೆರಗಿ ಬೇಡುವೆ ।
ನರಹರಿಯ ಚರಣಾರವಿಂದದ ।
ಪರಮ ಸೇವೆಯ ಗೈವ ನಿಮ್ಮಯ ದಾಸ ನಾನಿಹೆನು ॥
ಬರಿದೆ ಬಂದವನಲ್ಲ ನಿಮ್ಮಯ ।
ಕರುಣದಿಟ್ಟಿಯ ಬೇಡಿ ಬಂದೆನು ।
ತರಹರಿಸಪೆನ್ನನ್ನು ಪೊರೆವುದು ತೋರುತಭಯವನು ॥೧೯॥

ನಾನು ಕಬಿರನು ದೀನನಿರುತಿಹೆ ।
ನಾನು ಬಯಸುವ ನಿಮ್ಮ ಸೇವೆಯ ।
ಸಾನುರಾಗದಿ ಮಾಡಲೋಸುಗ ಬಂದೆ ನಿಮ್ಮಡಿಗೆ ॥
ನಾನು ಮ್ಲೇಚ್ಛನು ಜಾತಿಬಾಹಿರ ।
ಮೌನಿಶ್ರೇಷ್ಠರು ನೀವು ಜಾತಿಯ ।
ಮಾನದಭಿಮಾನಗಳ ತಾರದೆ ಸಲಹಿ ನೀವೆಂದ ॥೨೦॥

ದಿವಿಜಕುಲಪತಿನೀವು ಕಮಲಾ ।
ಧವನ ಭಕುತರು ಜಗದಿ ವಂದ್ಯರು ।
ರವಿಯ ತೇಜದಿ ತೊಳಗಿ ಬೆಳಗುವ ಶಾಸ್ತ್ರಕೋವಿದರು ॥
ತವ ಮುಖದಿ ಸಿರಿರಘುವರನ ನಾ ।
ಮಾವಳಿಯ ಕೇಳಲು ಬಯಸಿ ನಾ ।
ತವಕದಿಂದಲಿ ಬಂದೆ ಕರುಣಿಪುದೆನ್ನ ಕೃಪೆಯಿಂದ ॥೨೧॥

ನಿಮ್ಮ ನಂಬಿದೆ ಕಾಯವಚನದಿ ।
ನಿಮ್ಮ ನಂಬಿರುವೆನಗೆ ಮುದದೊಳು ।
ಬೊಮ್ಮ ಪಿತನನು ತೋರಿ ಕಾವುದು ಕರುಣದಿಂ ಗುರುವೆ ॥

ನಿಮ್ಮ ಪಾದದಸೇವೆ ಕರುಣಾದಿ ।
ನಿಮ್ಮ ಪೂಜೆಯ ಕೊಟ್ಟು ಪೊರೆವುದು ।
ನಿಮ್ಮ ದರುಶನವಿತ್ತು ಸೋಳ್ಪುದು ಸಾಧು ನೀವೆಂದ ॥೨೨॥

ಎಂದು ಪರಿಪರಿಯಿಂದ ಬೇಡುತ ।
ನಿಂದು ನೋಡುತ ಕಬಿರನಸ್ಕರಿ ।
ಚೆಂದದಿಂದಲಿ ನೋಡಿ ಪರಿಕಿಸೆ ಮೌನಿ ಯಿಂತೆಂದ ॥
ಮಂದಬುದ್ಧಿಯೆ ನಿನಗಿದೇತಕೆ ।
ಮಂದಭಾಗ್ಯನೆ ತೊಲಗು ತೊಲಗೆಂ ।
ದೆಂದು ನೂಕಲು ಮೌನಿವರ್ಯನ ನೋಡುತಿಂತೆಂದ ॥೨೩॥

ನೂಕಲೇತಕೆ ಗುರುವೆ ನಿಮ್ಮ ।
ನ್ನೇಕಭಾವದಿ ನಂಬಿ ಬಂದೆನು ।
ಸಾಕಬೇಹದು ಪತಿತಪಾವನನೆನ್ನ ಕರುಣದಲಿ ॥
ನೂಕಬೇಡಿರಿ ನಿಮ್ಮ ಸೇವೆಯ ।
ನೇಕೆ ಕೊಡುವೆಲೆ ತಂದೆ ಕಾಯುಲು ।
ಜೋಕೆ ಯೋಗಿ ಕೋಪವ ತೋರುತಿಂತೆಂದ ॥೨೪॥

ಎಲವೊ ಫಡಸಡ ತೊಲಗೊಲಗು ನೀ ।
ನೆಲವೊ ನೀನಿಸೆ ಜಾತಿಬಾಹಿರ ।
ನೊಲಿದ ಲಾಭವು ನಿನಗೆ ಶೂದ್ರಗೆ ನೀತಿಬಾಹಿರಗೆ ।
ತೊಲಗೆಲವೊ ನೀ ಸಹವಾಸಲ್ಲೈ ।
ಮಲಿನಮನಸಿನ ನರನು ನೀನಿಹೆ ।
ಯೆಲವೊ ಬಿಡುಬಿಡು ಮನದೊಳಾಸೆಯ ಹೋಗು ನೀನೆಂದ ॥೨೫॥

ಜಾತಿಬಾಹಿರನಾದೆನಾದೊಡೆ ।
ನೀತಿಬಾಹಿರನೆಂತು ಗುರು ನಾ ।
ನೀತಿಗಾಗಿಯೆ ಬಂದೆ ನಿಮ್ಮಡಿವಿಡಿದು ಭಕ್ತಿಯಲಿ ॥
ನೀತಿಬಾಹಿರನೆಂತು ನಿಮ್ಮಯ ।
ನೀತಿದಾತನ ಕರುಣವಿರುತಿರೆ ।
ಮಾತದೇತಕೆ ಬಂದೆ ಮತಿಯನು ನೀಡಿ ನೀವೆಂದ ॥೨೬॥

ಇಂತು ಪೇಳಿವ ನುಡಿಯ ಕೇಳುತ ।
ಸಂತ ರಾಮಾನಂದಯತಿವರ ।
ನಂತ ಕೋಪದೊಳಿಂತು ಪೇಳಿದ ನೋಡಿ ಖತಿಯಿಂದ ॥
ಇಂತು ಕಾಡುವೆಯೇಕೆ ತೊಲಗೈ ।
ನಿಂತು ಗಳಹಲು ಕೊಡುವೆ ಶಾಪವ ।
ನೆಂತು ಸೈರಿಸಲಿನ್ನು ಪೊರಮಡು ಜವದಿ ನೀನೆಂದ ॥೨೭॥

ತಂಡೆ ಬಂದೆನು ನಂಬಿ ನಿಮ್ಮಯ ।
ಚಂದಪಾದವ ಸೇವೆಗೈಯಲು ।
ಮಂದಭಾಗ್ಯನ ಮೋಕ್ಷಮಾರ್ಗಕೆ ಯೋಗ್ಯನೆನಿಸುವುದು ॥
ಇಂದು ನಿಮ್ಮಯ ಚಿತ್ತರಾಜ್ಯದಿ ।
ಬಂದೆನಾದೊಡೆ ನಿಮ್ಮ ಸೇವೆಯು ।
ನಂದದಿಂದಲಿ ಗೈದು ಪಾವನನೆನಿಪೆ ನಾನೆಂದ ॥೨೮॥

ತೊಲಗು ತೊಲಗೈ ಕಬಿರ ಬಾಹಿರ ।
ನೆಲಪೊ ತೋರದೆ ಮುಖವ ನೆನಗೀ ।
ಗೆಲಪೊ ಸಾರತ್ತತ್ತ ಪೋಗೆನೆ ಬಹಳ ವ್ಯಸನದಲಿ ॥
ನಿಲುಕದಾಪೆನೆ ನಿಮ್ಮಪಾದಕೆ ।
ಸಿಲುಕದಾಪೆನೆ ನಿಮ್ಮ ಕರುಣಕೆ ।
ಕಳೆದುಬಿಡುವರೆ ತಂದೆ ಕರುಣಾವನಧಿ ನೀವೆಂದ ॥೨೯॥

ಇಂತು ಪೇಳುತ ಕಬಿರ ನಡೆದನು ।
ಚಿಂತೆಯಿಂದಲಿ ಶೋಕಗೊಳ್ಳುತ ।
ಕಂತುಜನಕನ ಧ್ಯಾನಗೈಯುತ ಪೋದನವನಾಗ ॥
ಸಂತ ರಾಮಾನಂದಗುರುವ ।
ನ್ನೆಂತುಟೊಲಿಸುವುದೆಂದು ಯೋಚಿಸಿ ।
ಚಿಂತೆಗಾಸರೆಯಾದ ಕಬಿರನು ಮನದ ದುಃಖದಲಿ ॥೩೦॥

ಏನುಮಾಡಲಿ ಬಾರದಾದೆನೆ ।
ನಾನು ಚಿತ್ತಕೆ ವರದಗುರುವಿನ ।
ಮೌನಿಮಾನಸದಲ್ಲ ನಲಿಯೆನೆ । ನಾನು ಜಗದೊಳಗೆ ॥

ಮಾನಹೀನನನೆ ದೈವಹೀನನನೆ ? ।
ನಾನು ಬಾಹಿರ ನೀತಿ ಜಾತಿಗೆ ।
ನಾನು ನಿಂದ್ಯನೆ ? ಜಪತಪಾನುಷ್ಠಾನ ಕ್ರಿಯೆಗಳಿಗೆ ॥೩೧॥

ರಾಮ ನಿನ್ನಯ ನಾಮ ನುಡಿಯೆ ವಿ ।
ರಾಮ ವೇತಕ್ಕೆನಗೆ ? ಪಾಪ ವಿ ।
ರಾಮ ವಾಗಿರಲೆನ್ನ ಜಿಹ್ವೆಯು ಲೋಕಬಾಹಿರವೆ ॥
ರಾಮನಾಮವ ನುಡಿಯೆ ಬೇಹುದೆ ? ।
ಕಾಮಮೋಹಕ ನೀತಿ ಜಾತಿಯು ।
ರಾಮಮಂತ್ರವದಾವ ಜಾತಿಯೊ ತಿಳಿಯೆ ನಾನೆಂದ ॥೩೨॥

ವರಕಪಿಯು ಸೇವಿಸಿದ ರಕ್ಕಸ ।
ವರನು ಪೂಜಿಸಿ ಪಡೆದ ರಾಜ್ಯವ ।
ನುರೆ ಗುಹನು ಸೇವಿಸಿದ ರಘುವರನಂಘ್ರಿಯುಗಳವನು ॥
ಚರಣಸೇವೆಯು ಮಾಡಿ ಸಲಿದಳು ।
ವರದೆ ಶಬರಿಯು ಶೂದ್ರಕುಲಜನು ।
ಅರಿಯೆಬೇಹುದೆ ? ರಾಮಸೇವೆಗದೇಕೆ ಮತಭೇದ ॥೩೩॥

ಇರಲಿ ರಾಮಾನಂದ ಗುರುವನು ।
ಭರದೊಳೊಲಿಸುತ ರಾಮತಾರಕ ।
ವರದ ಮಂತ್ರವ ಪಡೆವೆ ಶೀಘ್ರದಿ ಗುರುವನುಗ್ರಹದಿ ॥
ಗುರುವ ಸೇವಿಸಿ ವರದ ಹಸ್ತದ ।
ಪರಮ ಕೃಪೆಯಂ ಪಡೆವೆ ಜವಮೊಳು ।
ಬರಿದೆ ಬಳಲಿಕೆ ಯೇಕೆನುತ್ತ ಕಬೀರ ಪೊರವಂಟ ॥೩೪॥

ಒಂದುದಿನದರುಣೋದಯದಿ ಮುದ ।
ದಿಂದ ಗಂಗಾತೀರದೇಶದಿ ।
ಬಂದು ಕಬಿರನು ಹಾಸುಗಲ್ಲಿನಮೇಲೆ ಮಲಗಿದನು ॥
ಎಂದಿನಂತೆಯೆ ನದಿಗೆ ರಾಮಾ ।
ನಂದ ಮುನಿವರ ಮಿಂಯಲೋಸುಗ ।
ತಂದೆ ಸಿರಿರಘುರಾಮ ಧ್ಯಾನವ ಮಾಡುತಲಿ ಬರಲು ॥೩೫॥

ರಾಮ ರಾಮೆನ್ನುತ್ತ ಬರುತಿರೆ ।
ರಾಮಯತಿವರ ಭರದೊಳೀಯುತ ।
ರಾಮಭಕ್ತ ಕಬೀರ ಶಿರವನು ಮೆಟ್ಟಿದನು ಮುನಿಯು ॥
ರಾಮ ರಾಮೆನ್ನುತ್ತ ನೆನೆದನು ।
ರಾಮಸಂಕೀರ್ತನೆಯ ಕೇಳುತ ।
ರಾಮಭಕ್ತನು ಕುಣಿಯುತೆದ್ದನು ಗುರುವಿಗಭಿನಮಿಸಿ ॥೩೬॥

ವರದ ರಾಮಾನಂದ ಕಾಣದೆ ।
ವರಕಬೀರನ ಶಿರವನೆಡವಲು ।
ಭರದೊಳೆದನು ರಾಮ ರಾಮೆನ್ನುತ್ತ ಕುಣಿಯುತ್ತ ॥
ಶಿರವು ಗುರುವಿನ ಪಾದ ಸೋಕಲು ।
ಭರದೊಳೇಳುತ ಬಾಗಿ ನಮಿಸಿದ ।
ಪರಮಪಾವನನಾದೆ ನಾನಿಂದೆಂದು ಕೂಗುತಲಿ ॥೩೭॥

ರಕುತ ಸೋರ್ವುದು ಫಣೆಯು ಮಧ್ಯದಿ ।
ಸುಕರ ಪಾದದ ಸೇವೆಯೆಂದುರೆ ।
ಭಕುತಿಯಿಂದಲಿ ಕುಣಿದು ನುತಿಸಿದ ಭರದಿ ಗುರುವರನ ॥
ಸಕಲ ಲೋಕದಿ ನಾನೆ ಧನ್ಯನು ।
ಸಕಲ ಭುವನದ ರತ್ನಸಿಕರವು ।
ಪ್ರಕಟವಾದುದು ಎನಗೆ ಇಂದಿನದಿನವೆ ಪುಣ್ಯದಿನ ॥೩೮॥

ಗುರುವೆ ನಿಮ್ಮಡಿ ಎನಗೆ ಸೋಂಕಿತು ।
ಗುರುವೆ ನಿಮ್ಮಯ ಪಾದಸೇವೆಯ ।
ಭರದಿ ಕೊಡುವುದು ದಾಸನೆನ್ನನು ಕರುಣಿಪುದು ಮುದದಿ ॥
ಗುರುವೆ ನಿಮ್ಮಡಿ ಸೋಂಕುತಲಿ ನಾ ।
ಪರಮಪಾವನನಾದೆನಿನ್ನೀ ।
ಧರೆಯೊಳಗೆನಗೆ ಜಾತಿಸಂಕರವಿಲ್ಲ ಮಿನಿತಿಲ್ಲ ॥೩೯॥

ನಿಮ್ಮ ಪಾದದ ಸೇವೆ ಪಾವನ ।
ನಿಮ್ಮ ದರ್ಶನ ರಾಮರೂಪವು ।
ನಿಮ್ಮ ರೂಪವೆ ಆತ್ಮರೂಪವು ನಾಮ ಹರಿನಾಮ ॥

ನಿಮ್ಮ ಪಾದವೆ ಸಕಲಕ್ಷೇತ್ರವು ।
ನಿಮ್ಮ ಪೂಜೆಯೆ ಹರಿಸಮರ್ಪಣೆ ।
ನಿಮ್ಮ ಸೇವೆಯೆ ಮೋದವೆನಗೀಗೆಂದ ಕವಿವೀರ ॥೪೦॥

ಎಂದ ಮಾತನು ಕೇಳಿ ರಾಮಾ ।
ನಂದ ಮುನಿಪತಿ ಮೆಚ್ಚಿ ಕಬಿರನ ।
ಮುಂದೆ ಪರಿಕಿಪೆನೆಂದು ಕೋಪವ ನಟಿಸುತಿಂತೆಂದ ॥
ಮಂದಮತಿ ಗಳಹದಿರು ಫಡಫಡ ।
ಬಂದು ಸೋಂಕುತಲೆನ್ನ ಪಾದವ ।
ದುಂದುಮಾಡಿದೆ ಮೈಲಿಯಾದುದು ಪಾಪಿ ನಿನ್ನಿಂದ ॥೪೧॥

ಎಲವೊ ಶೂದ್ರಕ ಶಾಪವೀವೆನು ।
ತೊಲಗು ತೋರದೆ ನಿನ್ನ ಮೋರೆಯ ।
ಛಲವ ಗೈದ.ಪೆ ತೊಲಗು ತೊಲಗೆಂದೆನುತ ತಾಡಿಸಿದ ॥
ಕಾಲಿಗಿಟ್ಟಿಹ ಪಾದರಕ್ಷೆಯು ।
ಸೆಳೆದು ತೆಗೆಯುತ ಕಬಿರದಾಸನ ।
ತಲೆಗೆ ಹೊಡೆದನು ರಾಮಮುನಿಪತಿ ಕೋಪಮುಖದಿಂದ ॥೪೨॥

ಪಾದುಕಾತಾಡನದಿ ಧನ್ಯನು ।
ಪಾದುಕಾಸ್ಪರ್ಶನದಿ ಪಾವನ ।
ನಾಪೆ ರಾಮಾನಂದಗುರುವೇ ನಾನು ಬಾಹಿರನೇ ॥
ಪಾದ ಸೋಂಕಲು ಮೋಕ್ಷ ದೊರೆವುದು ।
ಪಾದುಕಾಘಾತದೊಳು ಪಾವನ ।
ಸಾಧುಸಂತರಸೇವೆ ದೊರೆವುದು ಗುರುವೆ ಋಣಿಯಾದೆ ॥೪೩॥

ಕ್ಷಮೆಯ ಬೇಡುವೆ ಕೋಪಬಿಡುವುದು ।
ವಿಮಲ ಮನದೊಳಗೆನಗೆ ನಿಬಿಡವ ।
ಸುಮತದಿಂದಲಿ ಕರುಣಿಸೀಗಳೆ ಸಲಹಬೇಕೆನ್ನ ॥
ಕ್ಷಮೆಯ ಬೇಡುವೆ ಕರವ ಜೋಡಿಸಿ ।
ವಿಮಲ ರಘುಪರ ರಾಮತಾರಕ ।
ಸುಮತಿ ಉಪದೇಶವನು ಕೊಡುವುದು ಸೇವೆಯನು ಕೊಂಡ ॥೪೪॥

ಶರಣು ರಘುಪತಿ ವಿಠಲಭಜಕನೆ ।
ಶರಣು ಶರಣು ಮುನೀಂದ್ರವಂದಿತ ।
ಶರಣು ವೈಷ್ಣವವೀರ ಯತಿಕುಲವರ ಪರಮಪಾವನನೆ ।
ಶರಣು ಮೋಹನರೂಪ ರಾಮಾ ।
ಶರಣು ಪಾವನನಾಮ ಮೌನೀ ।
ಶರಣುನಿನ್ನಯ ಪಾದಪಂಕೇರುಹಯುಗಕೆ ಶರಣು ॥೪೩॥

ಮೆಚ್ಚಿದನು ಮೌನೀಶ ಮನದಲಿ ।
ನೆಚ್ಚಿನಿಂದಲಿ ಬಾಚಿ ಕಬಿರನ ।
ಮೆಚ್ಚುತಪ್ಪಿದ ಭರದೊಳಾಲಿಂಗಿಸುತ ಮೋಹದೊಳು ॥
ಮೆಚ್ಚಿದೆನು ನಾನಿನ್ನ ಭಕ್ತಿಗೆ ।
ಮೆಚ್ಚಿ ಕೊಡುವೆನು ಕೇಳು ವರವನು ।
ಮೆಚ್ಚಿಕೆಯ ನೀ ಪೊಂದಿ ಪಾವನನಾದೆ ಜಗದೊಳಗೆ ॥೪೪॥

ಮುನಿಯ ವಚನವ ಕೇಳಿ ಹರುಷದಿ ।
ವಿನಯದಿಂದಲಿ ಕರವ ಮುಗಿಯುತ ।
ಲನುನಯದಿ ನಮಿಸಿದನು ಮೌನಿಯ ನತುಳ ಪ್ರೀತಿಯೊಳು ॥
ಮನಕೆ ಬಂದೆನೆ ! ನಿಮ್ಮ ಪ್ರೀತಿಗೆ !
ನಾನು ಬಂದೆನೆ !! ಧನ್ಯ ನಾನೇ !
ವಿನುತ ಧನ್ಯನು ! ಮೌನಿವರ್ಯರೆ ನಿಜವ ನರಿಯಲ್ಕೆ ॥೪೫॥

ರಾಮತಾರಕ ಮಂತ್ರವನ್ನರೆ ।
ಪ್ರೇಮದಿಂದುಪದೇಶಿಪುದು ಸಲೆ ।
ರಾಮಣೀಯಕ ಹರಿಯ ನಾಮದ ಗೂಢವನು ತಿಳುಹಿ ॥
ಪಾಮರನ ನೆನ್ನನ್ನು ಪೊರೆವುದು ।
ನಾಮಮಹಿಮೆಯ ಬೋಧಿಸುತ್ತಲಿ ।
ಕಾಮರಹಿತನೆ ನಿಮ್ಮ ಸೇವೆಯ ನಿತ್ಯ ಮಾಡದಿಂದ ॥೪೬॥

ಮನದಿ ಹರುಷವನಾಂತು ಮುನಿಪತಿ ।
ಮನುನಯದಿ ಕಬಿರನ ಶಿರವ ನಾ ।
ಘ್ರಾಣಿಸುತ ವರರಾಮತಾರಕ ಮಂತ್ರವರುಹಿದನು ॥

ಅನಿತು ಮಹಿಮೆಯ ಪೊಂದಿ ಕಬಿರನು |
ವಿನಯದಿಂದಲಿ ನಮಿಸಿ ಸೇವೆಯ |
ನನುನಯದಿ ಮಾಡಿದನು ಗುರುವನು ಪರಮ ಮೋದದೊಳು ||೪೯||

ರಾಮತಾರಕಮಂತ್ರ ಮಹಿಮೆಯ |
ನಾ ಮಹಾತ್ಮನು ತಿಳಿದು ಜಗದೊಳು |
ರಾಮನಾಮದ ಮಹಿಮೆಯನ್ನುರೆ ಬೀರಿದನು ಜಗದಿ ||
ರಾಮಚಂದ್ರ ಸುಧಾಕರಾಬ್ಜ ಲ |
ಲಾಮ ಸೀತಾಪ್ರಾಣ ಸಿರಿರಘು |
ರಾಮ ವಿಠ್ಠಲ ನಂಘ್ರಿಕಮಲವ ನೆನೆಯುತಿರುತಿಹನು ||೫೦||

ಸಂಧಿ ೩. ಪದ್ಯ ೨೧೩ ಕ್ಕೆ ಮಂಗಳಮಸ್ತು.



*

# ನಾಲ್ಕನೆಯ ಸಂಧಿ.

ಸೂ|| ಅನಘ ರಾಮೋತ್ಸವವ ಮೋದದಿ |
ವಿನುತ ಕಬಿರನು ಗೈದು ಸಂತರ |
ನನುನಯದಿ ಸತ್ಕರಿಸಿ ಮೆರೆದನು ಭಕ್ತಿಸಾಗರದಿ ||

ತೊರೆದು ಮಮತೆಯ ದೇಹದೊಳು ನೆರೆ |
ಧರೆಯ ಸೊಗಸನು ಲೆಕ್ಕಿಸದೆ ಕುಜ |
ನರ ನುಡಿಯ ಮನದೊಳಿರಿಸದೆ ಹರಿಯ ಮಿಗೆ ನೆನೆಯುತಲಿ ||
ತೊರೆಯುತಿಂದ್ರಿಯಸುಖವ ನರಿಷ |
ಡ್ವೈರಿಗಳ ಜಯಿಸುತ್ತ ಲನುಪಮ |
ಪರಮ ವೈರಾಗ್ಯವನು ಪೊಂದಿದ ಭರದಿ ಕವಿವೀರ ||೧||

ರಾಮನಾಮವೆ ಧನವು ಕನಕವು |
ರಾಮನಾಮವೆ ಸೌಖ್ಯಸಾಧನ |
ರಾಮಮಂತ್ರವೆ ವೇದಘೋಷವು ಜಗದಿ ತೊದಲಲಿಯು ||
ರಾಮಭಕ್ತರೆ ದೈವರೂಪರು |
ರಾಮಸಂಕೀರ್ತನೆಯೆ ಮಂಗಳ |
ರಾಮಭಜನೆಯ ಗೈವ ಮಂದಿರ ಪರಮ ವೈಕುಂಠ ||೨||

ಎಲ್ಲಿ ಹರಿಕೀರ್ತನೆಯ ಮಾಳ್ಪರೊ |
ಎಲ್ಲಿ ಸಿರಿಪತಿ ಭಕ್ತರಿರುವರೊ |
ಎಲ್ಲಿ ಹರಿಯನು ನುತಿಸಿ ಕುಣಿವರೊ ? ಭರದಿ ನಲಿಯುವರೊ ||
ಎಲ್ಲಿ ರಘುಪತಿ ಗುಣವ ಪಾಡುತ |
ಘಿಲ್ಲುಘಿಲ್ಲೆನೆ ಭರದಿ ಕುಣಿವರೊ |
ಅಲ್ಲಿ ನಲಿವನು ರಾಮ ಭೂವೈಕುಂಠ ವೆನಿಪುದದು ||೩||

ಮನದೊಳಾಶಾದಿಗಳ ತೊರೆಯುತ |
ತನುವ ಮರೆಯುತ ಹರಿಯ ಚರಣದಿ |
ಮನವ ನರ್ಪಿಸಿ ರಾಮನಾಮವ ಪಾಡುತಲಿ ಕಬಿರ ||
ಕುಣಿವ ನುತಿಸುತ ಝುಣಝುಣೆನ್ನುತ |
ಕುಣಿವ ಹರಿಯನೆ ಮನದಿ ಚಿತ್ರಿಸಿ |
ಕುಣಿವ ನೈಕ್ಯಾನುಭಾವವ ತಳೆದು ರಾಮನಲಿ ||೪||

ಸಾಧುಗಳು ನಲಿಯುವರು ಕೇಳುತ ।
ಮೋದಪಡುವರು ರಾಮಕೀರ್ತನ ।
ವಾದದಿಂದಲಿ ಚಿತ್ತ ಶುದ್ಧಿಯ ಮಾಡಿ ನಲಿಯುವರು
ಭೇದವಿಲ್ಲದೆ ಜಾತಿಮತಗಳ ।
ಕ್ರೋಧವಿಲ್ಲದೆ ಧರ್ಮಮತದೊಳು ।
ಸಾಧು ಸಂತರು ನೆರೆದು ಕೀರ್ತನಮಾಡುವರು ಭರದಿ ॥೫॥

ರಾಮಭಕುತ ಕಬೀರ ಸಾರಿದ ।
ರಾಮನಾಮದ ಮಹಿಮೆಯನ್ನುರೆ ।
ಈ ಮಹೀತಲದೊಳಗಖಿಳ ಸತ್ಸೇವೆಯನು ಮಾಡಿ ॥
ಕಾಮಮೋಹಾದಿಗಳ ಜಯಿಸುತ ।
ರಾಮನಂಘ್ರಿಯ ನಂಬಿ ಭಜಿಸಲು ।
ಭೀಮಭಕುತಿಯ ತೋರಿ ಜನರಿಗೆ ಮೆರೆದ ಕವಿವೀರ ॥ ॥೬॥

ಬೇಡಿದೊಡೆ ಕೊಡರಾರು ದ್ರವ್ಯವ ।
ಕಾಡುವರು ಸಲೆ ಕುಮತಿತನದಲಿ ।
ಮೋಡಿಗೈಯುತ ಹಾಸ್ಯಮಾಡುತ ದುಷ್ಟಜನವ್ರಾಳ ॥
ಕಾಡುವರು ಭಕ್ತರನು ಸುಮ್ಮನೆ ।
ಕಾಡಿನಲಿವರು ನೋಡಿ ಹಿಂಸೆಯ ।
ಮಾಡುವರು ಕುಮತಿಗಳು ಬಹು ಕ್ರೂರಕೃತ್ಯವನು ॥೭॥

ಸಾಧುಗಳ ನಣಕಿಸುತ ದೂರುತ ।
ಮೋದಪಡುವರು ಕುಮತಿಗಳು ಬಲು ।
ಬಾಧೆಕೊಡುತಲಿ ಹಾಸ್ಯಮಾಡುತ ನಗುತ ಕುಣಿಯುತಲಿ ॥
ಸಾಧುತನವನು ಮುರಿಯಲಾರದೆ ।
ಸಾಧುಕಾರ್ಯಕೆ ವಿಘ್ನವೀಯುತ ।
ಸಾಧುಸಂತರ ಕಷ್ಟಪಡಿಸುತ ನಲಿವರತಿ ಭರದಿ ॥೮॥

ಮಂದಮತಿಗಳು ಕಬಿರಗೈಯುತ ।
ಮಂದರಾಧರ ಭಜನಕಾರ್ಯಕೆ ।
ಕುಂದುಗೈಸಲು ದುಷ್ಟಕಾರ್ಯವ ನೊಂದ ನೆಸಗಲ್ಕೆ ।

ಕಂದಿ ಕುಂದಿಹ ಬಡವ ನಿವನಿಹ ।
ದುಂದು ಮಾಡುವನೇನ ನೋಡುವೆ ।
ಛೊಂದು ಗಳಹುತ ಮೋಸಮಾಡಲು ಸಂರಿ ಕೇಳಿದನು ॥೯॥

ಅರಿಯದೆಲೆ ಪತ್ರಗಳ ಬರೆಸುತ ।
ಸರುವ ಸಾಧುವ್ರಜಕೆ ಬರಲಿಕೆ ।
ಪರಮಸಾಧು ಕಬೀರ ಮುದ್ರಿಕೆಯಿತ್ತು ಕಳುಹಿದರು ॥
ಅರಿಯನೀ ಮೋಸವನು ಕಬಿರನು ।
ಹರಿಯ ಚರಣಸರೋಜವನ್ನುರೆ ।
ಸ್ಮರಿಸುತಿರುತಿಹ ನಂಬಿ ಮನದಲಿ ಪರಮ ಮೋದದೊಳು ॥೧೦॥

ಶ್ರೀಮದನುಪಮಮಹಿಮ ರಘುವರ ।
ರಾಮಚಂದ್ರನ ಚರಣಭಕುತರ ।
ಕೋಮಲಾಂತಃಕರಣಸೇವಕ ಕಬಿರ ಬಿನ್ನಹವು ॥
ರಾಮಚಂದ್ರೋತ್ಸವವ ಗೈಯುವೆ ।
ರಾಮಭಜನಾ ಕಾರ್ಯಕೋಸುಗ ।
ರಾಮಭಕುತರು ಬರಲು ಬೇಕುದು ಚೈತ್ರಮಾಸದೊಳು ॥೧೧॥

ಬರೆಸಿ ಪತ್ರನಸಿಂತು ದುರುಳರು ।
ತ್ವರದಿ ಕಳುಹಿಸಿ ಸುಮ್ಮನಿದ್ದರು ।
ಗರುವ ಜನಗಳು ಮೋದಪಡುತಲಿ ಮುಂದಿನವಘಡಕೆ ॥
ಕರುಬುತಲಿ ನೆರೆ ಸಾಧುವೇಷವ ।
ಧರಿಸಿ ಮೋಸವಗೈದು ಕಬಿರನ ।
ಬರಿದೆ ಹಿಂಸೆಯಮಾಡಿ ನಲಿವರು ಪರಮಕಪಟಿಗಳು ॥೧೨॥

ಅರಿಯನೀ ಕಪಟಿಗಳ ಕಬಿರನು ।
ಅರಿಯನೀ ಮಿಥ್ಯಾದಿಗಳ ಮಿಗೆ ।
ಅರಿಯ ನಿತರ ಕುಯುಕ್ತಿ ಚಪಲವ ನರಿಯ ಕವಿವೀರ ॥
ವರದ ಸೀತಾರಾಮ ಮಂತ್ರವ ।
ನರಿತು ಭಜನೆಯ ಗೈಯುತಿಹ ನೆರೆ ।
ಪರಮಹಂಸನು ಹರ್ಷದಿಂದಲಿ ನಲಿಯುತಿರುತಿಹನು ॥೧೩॥

ಸಾಧುಗಳು ಬರುವ್ವುದನು ದೂರದಿ ।
ಸಾಧುಕಮಲನು ಕಂಡು ಜನಕಗೆ ।
ಸಾದರದಿ ತಿಳುಹಿದನು ಮನದೊಳು ಮುದವ ತಾಳುತ್ತ ॥
ಸಾಧುಕಬಿರನು ಸುತನ ಕೂಡುತ ।
ಸಾಧುಗಳ ಸಂದರುಶನಕೆ ನಡೆ ।
ದೈದಿದನು ಮೋದದೊಳು ನೋಡಲು ಚ(ತ್ರವೆ)ವೇಗದಲಿ ॥೨೩॥

ಸಂತರಂ ಕಾಣುತ್ತ ಕರೆದನು ।
ಸಂತಸದ ಕಂಬನಿಯು ಕಬಿರನು ।
ಕಂತುಜನಕನ ಭಕ್ತವೃಂದಕೆ ನಮಿಸಿದನು ಭರದಿ ॥
ಅಂತರಂಗದಿ ಹಿಗ್ಗಿ ನಲಿಯುತ ।
ಅಂತರಾತ್ಮನ ಚಿಂತಿಸುತ್ತಲಿ ।
ಸಂತರನು ಕರೆದೈದು ನಡೆದನು ತನ್ನ ಮಂದಿರಕೆ ॥ ॥೨೪॥

ಕೇಳಿ ಕುಶಲವ ಹರಿಹಸಾದವ ।
ಮೇಲುಪ್ರೀತಿಯೊಳಿಟ್ಟು ಸಂತರ ।
ಓಲಗಿಸಿ ನುಡಿಸಿದನು ಮುದದೊಳು ಕುಶಲವೇ ತಮಗೆ ॥
ಮೇಲು ಸಾಧುವ್ರಜಕೆ ಕ್ಷೇಮವೆ ।
ನೀಲರೂಪನ ಭಜನ ವಂದನ ।
ಮೇಲುತರದಲಿ ನಡೆವುದೇ ಪೇಳುವುದು ನಮಗೆಂದ ॥೨೫॥

ನಾವು ಕ್ಷೇಮವು ನಿಮ್ಮ ಕುಶಲವ ।
ತೀವಿದಾತುರದಿಂದ ಬಯಸುತ ।
ನಾವು ಬಂದೆವು ನಿನ್ನ ದರುಶನಕಾಗಿ ಹಂಬಲಿಸಿ ॥
ಪಾವನನೆ ನೀ ಧನ್ಯ ಜಗದೊಳು ।
ಭಾವಿಸಲು ನಿನ್ನಂಥ ಧನ್ಯರು ।
ಬುವಿಯೊಳಗೆ ಸನ್ಮಾನ್ಯರನು ಕಂಡರಿಯೆವಾವೆನಲು ॥೨೬॥

ಶ್ರೀಶ ಭಜನಾಕಾರ್ಯ ನಡೆವುದು
ತೋಷದಿಂದಲಿ ಭಕುತಿಯಿಂದಲಿ ।
ಆಶಪಾಶಾದಿಗಳ ತೊಲಗಿಸಿ ಹರಿಯ ಮಹಿಮೆಯೊಳು ॥

ಶ್ರೀಶ ವಾರ್ತೆಯ ಕೇಳುತಿರುವೆವು|
ಶ್ರೀಶ ಭಜನೆಯ ನೋಡುತಿರುವೆವು |
ಶ್ರೀಶ ಭಕ್ತರ ಸೇರಿ ನಲಿಯುವೆನೆಂದು ಪೇಳಿದರು ||೨೭||

ನಿಮ್ಮ ಪತ್ರವ ನೋಡಿಕೊಂಡೆವು |
ನಮ್ಮನೆಲ್ಲರ ರಾಮಭಜನಕೆ |
ನೆಮ್ಮಿಸಿಂದಲಿ ಬರಲಿಕಾಗಿಯೆ ಬರೆದ ರೀತಿಯಲಿ ||
ನಿಮ್ಮ ದರುಶನವನ್ನು ಮಾಡಲು |
ಬೊಮ್ಮಜನಕನ ಉತ್ಸವಾದಿಯ |
ನೊಮ್ಮೆ ನೋಡಲು ತವಕದಿಂದಲಿ ಬಂದಿಹೆವು ನಾವು ||೨೮||

ಭಕ್ತವೃಂದವು ನುಡಿವ ಮಾತಂ |
ಭಕ್ತ ಕಬಿರನು ಕೇಳಿ ಪೇಳಿದ |
ಭಕ್ತ ದರುಶನದಿಂದ ಪಾವನನಾದೆ ನಾನಿಂಗ ||
ಮತ್ತೆ ಬರೆಸಿದೆ ಪತ್ರ ರಘುಪತಿ |
ಯುತ್ಸವಕೆ ಬರಹೇಳಿ ನಿಮ್ಮಯ |
ಚಿತ್ತವೊಲು ನೆಲಸಿಹೆನು ಮುದವೊಳಗೆಂದ ಕಪಿವೀರ ||೨೯||

ನಮಿಸಿ ಭರದಿಂ ಭಕ್ತಿಯಿಂದಲಿ |
ಕಮಲನಯನನ ಭೃತ್ಯನೆಂದನು |
ವಿಮಲನಾದೆನು ನಾನು ನಿಮ್ಮಯ ದಿವ್ಯ ದರುಶನದಿ ||
ಮಮತೆಯಿಂ ಬಂದುದಕೆ ತೋಷಿಪೆ |
ವಿಮಲ ರಾಮೋತ್ಸವವ ಕೈಗೊಂ |
ಡಮಿತ ಹರುಷದಿ ನಡೆಸಿ ನಲಿಯುವೆ ರಾಮಸೇವೆಯೊಳು ||೩೦||

ನಾಳೆ ರಾಮೋತ್ಸವವ ತೊಡಗುವೆ |
ಕೇಳಿ ಶ್ರೀರಘುರಾಮ ಜನನವು |
ನಾಳೆ ನವಮಿಯ ದಿವಸಜನ್ಮಮುಹೂರ್ತ ಪ್ರವಾಹದೆ ||
ಪೇಳುವೆನು ಪಟ್ಟಾಭಿಷೇಚನ |
ಮೇಲು ಹುಣ್ಣಿಮೆಯ ದಿವಸ ಗೈವುದು |
ಮೇಲೆ ಶಯನೋತ್ಸವವು ನಡೆವುದು ರಾಮವಿಠಲಂಗೆ ||೩೧||

ಪರಮ ಹರುಷಿತರಾಗಿ ಮುನಿಗಳು ।
ವರಕಬೀರನ ಹರಸಿ ಪೊಗಳುತ ।
ಸಿರಿರಮಣನಂ ಪಾಡತುಲಿ ನೆರೆ ಕುಳ್ಳಿರುತ್ತಿರಲು ॥
ತರಿಸಿದನು ಫಲಮೂಲ ಮುನಿಗಳೆ ।
ಗಿರಿಸಿದನು ಮುದದೊಳತಿ ಮೋಹದಿ ।
ತರಿಸಿ ಪಾನೀಯುವನು ಕೊಟ್ಟನು ಸಾಧುಸಂತರಿಗೆ ॥೩೨॥

ಮುಂದೆ ಶ್ರೀ ರಘುವರನ ಪೂಜಾ ।
ನಂದ ಕಾರ್ಯಕೆ ದ್ರವ್ಯವಿಲ್ಲದೆ ।
ಅಂದು ಯೋಚಿಸಿ ಮಾಡಲೇನೆನೆ ಚಿಂತಿಸಿದ ತಾನು ॥
ಮುಂದೆ ಮಾಡುವದೇನು ದ್ರವ್ಯವ ।
ನಿಂದು ಕೊಡುವವರಾರು ತನಗಿ ।
ನ್ನೆಂದು ಮರುಗಿದ ಕಬಿರ ತನ್ನೊಳು ಕುಳಿತು ತಾನೊಬ್ಬ ॥೩೩॥

ಆರು ಕೊಡುವರು ಹಣವ ನೆನಗೀ ।
ಗಾರು ನೆರವಾಗುವರು ? ಪುಣ್ಯವ ।
ನಾರು ಪಡೆವರೊ ? ತಿಳಿಯೆ ನೆನ್ನುತ ಚಿಂತಿಸಿದ ತಾನು ॥
ಆರುಸಾವಿರ ಸಾಧುಗಳ ನೀ ।
ಗಾರು ಭೋಜನ ಗೈಸಿ ತಣಿಸುತೆ ।
ಭೂರಿಪುಣ್ಯವ ಪಡೆದು ನಲಿವರೊ ಕಾಣೆ ನಾನೆಂದ ॥೩೪॥

ಕೇಳಿ ತರುವೆನು ಹಣವ ನೀಗಲೆ ।
ಕೇಳಿ ತುಲಸೀದಾಸ ಸೇಠನ ।
ಭಾಳದ್ರವ್ಯವ ತಂದು ರಾಮೋತ್ಸವವ ಮಾಡುವೆನು ॥
ಸಾಲ ಕೊಡುವನು ಸಾಹುಕಾರನು ।
ಸಾಲಕಾಗಿಯೆ ರಾಮನಾಮವ ।
ಮೇಲುತರವಲ್ಲೊತ್ತೆಯಿಡುತಲಿ ತರುವೆ ಧನವನ್ನು ॥೩೫॥

ಕಾಲಕಳೆಯದೆ ತುಳಸಿದಾಸನ ।
ನಾಲಯುವ ತಾ ಪೊಕ್ಕು ಕಂಡನು ।
ಮೇಲುಪೀಠದಿ ಮಂಡಿಸಿರುತಿಹ ಸಾಹುಕಾರನನು ॥

ಕೇಳಿ ಯೋಗಕ್ಷೇಮವನು ಸು ।
ಲೋಲಮತಿ ಮಿಗೆ ವಿನಯದಿಂದಲಿ ।
ಹೇಳಿದನು ಬಲು ಲಜ್ಜೆಯಿಂದಲಿ ಧನವ ನೀಯೆಂದು ||೩೬||

ಭರದಿ ನಕ್ಕನು ಸಾಹುಕಾರನು ।
ಮರುಳೆ ಬಿಡುಬಿಡು ಹಣದ ಮರುಳನು ।
ಬರಲು ನಾಚಿಕೆಯಿಲ್ಲ ನಿನಗೀ ಮರುಳುತನವೇಕೆ ||
ತಿರಿದು ತಿಂಬುವೆ ನೀನು ಕಷ್ಟದಿ ।
ತಿರುಕ ನಿನಗೇಕಿಷ್ಟು ದ್ರವ್ಯವು ।
ತೆರಳು ಕೊಡೆನಾ ಧನವ ನಿನಗೆಂದೆನುತ ಗರ್ಜಿಸಿದ ||೩೭||

ರಾಮಸೇವೆಯ ಗೈವ ಪುಣ್ಯವ ।
ರಾಮಭಕ್ತರ ಸೇವೆಯಧಿಕವ ।
ವಿಮಲಮತಿ ನೀ ಪೊಂದಿ ಸುಖಿಸುವೆ ಹಣವ ನೀಡುವೊಡೆ||
ರಾಮ ಕೊಡುವನು ಸಕಲ ಸಂಪದ ।
ರಾಮನೀವನು ಸಕಲ ಸೌಖ್ಯವ ।
ಪ್ರೇಮಿ ಮೋಕ್ಷವ ನೀವ ನಿನಗೀಗೆಂದ ಕವಿವೀರ ||೩೮||

ಇರಲಿ ರಾಮನ ಸೇವೆ ನಿನಗೆಯೆ ।
ಇರಲಿ ಸಂತರಪೂಜೆ ನಿನಗೆಯೆ ।
ಬರಲಿ ಪುಣ್ಯವು ಬರಲಿ ಮೋಕ್ಷವು ಇರಲಿ ನಿನಗಾಗಿ ||
ಬರಿದೆ ಬಳಲಿಕೆಯೇಕೆ ದ್ರವ್ಯವ ।
ತಿರುಕ ನಿನಗಾ ನೀಯಲಾರೆನು ।
ತೆರಳು ತೆರಳ್ಕೈ ಬಿಡುಬಿಡಾಸೆಯ ಧನದಿ ಹೋಗೆಂದ ||೩೯||

ಪುಸಿಯ ನಾಡುವನಲ್ಲ ಸಂತರು ।
ಹಸಿದಿಹರು ಬಲು ನಾಳೆಯಿಂ ನಾ ।
ಕುಸುಮಶರಪಿತ ರಾಮ ಭಜನಾ ಕಾರ್ಯವನು ಗೈವೆ ||
ಜಸವ ಪೊಂದುವೆ ಜಗದಿ ಸುಲಭದೊ ।
ಳಸುವ ಪಾವನಗೈವೆ ಹರಿಪದ ।
ಕುಸುಮ ಸೇವಿಸಿ ಸಾಹುಕಾರನೆ ನೋಡು ನಿನಗೆಂದ ||೪೦||

ದುರುಳ ತುಳಸೀದಾಸ ಕೇಳುತ ।
ಬರಿದೆ ದ್ರವ್ಯವನೀಡೆ ನೆನ್ನೊಳು ।
ಗುರುತರದ ರತ್ನವನು ಕೊಟ್ಟೊಡೆ ಹಣವ ನೀಯುವೆನು ॥
ತ್ವರದಿ ಪೇಳೇನ ಕುಡುವೈ ಹುಲು ।
ತಿರುಕ ನೀನಾಗಿರುವೆ ನಿನ್ನೊಳ ।
ಗರಿಮ ನೋಡಲು ಮೊರೆಯಲಾರದು ಕವಡಿ ಕುರುಡೆಂದ ॥೪೧॥

ಒತ್ತಿ ಮಿಡುನೆನು ರಾಮರತ್ನವ ।
ನಿತ್ತು ಪ್ರೇಮದಿ ನಿನ್ನ ವಶದೊಳು ।
ಮತ್ತೆ ನೀಡ್ವೆ ದ್ರವ್ಯರಾಶಿಯ ರಾಮರತುನಕ್ಕೆ ॥
ಉತ್ತಮದಲುರುತರದ ಪದವಿಯ ।
ನಿತ್ತು ಸಲಹುವ ನಿನ್ನ ರಘುವರ ।
ಸ್ವತ್ತು ಮಾಡಿದೆ ನಿನಗೆ ಸಿರಿರಘುರಾಮ ನಾಮವನು ॥೪೨॥

ಸಕಲ ಭುವನಕೆ ರತ್ನ ಮಣಿಮಯ ।
ಮಕುಟಕುಂಡಲಧಾರಿ ರಾಮನೆ ।
ಭಕುತ ಕೋಟಿನ ಪರಮ ಪಾವನರತ್ನ ಸಿರಿರತ್ನ ॥
ಸಕಲ ದುರಿತಾಪಹರಣ ರತ್ನವು ।
ಮುಕುತಿದಾಯಕ ರತ್ನ ದಿವ್ಯನು ।
ಭಕುತಿಯಿಂದಲಿ ಭಜಿಸೆ ರತ್ನವು ರಾಮರತ್ನವಿದು ॥೪೩॥

ಎಲವೊ ಬಿಡುಬಿಡು ನಿನ್ನ ಮರುಳನು ।
ನಿಲುಕಲಾರದು ರಾಮನಾಮಕೆ ।
ಬಲುಮಹಾಪ್ರ ನಿನಗಿಂಗ ದೊರಕದು ಯೋಗ ನೀನೆಂದ ॥
ತುಳಸಿದಾಸನು [illegible] ।
ಚೆಲುವ ಚಿಂತಿಸಿ ನೋಡನಾರಲು ।
ನಿಲುಕೆ [illegible] ಬಯಸಲಸುವಾದ ॥೪೪॥

ಮನಮೊ [illegible] ಮೋಹದಿ ।
ತನುಸುಖವ ಬಯಸುತ್ತ ಕಬಿದವ ।
ಜನಿಸುತ [illegible] ಸೊಪ್ಪಿಕೊಟ್ಟರೆ ಧನವ [illegible] ॥

ಮನದಿ ನಿಶ್ಚಯಮಾಡಿ ಮೋಹಾ ।
ಜನಕದೊಳು ಕೇಳುತ್ತ ಸುಂದರಿ ।
ಮಣಿಯು ರೂಪವ ನೆನೆದು ಕಾಮದಿ ಮರೆತ ತನುಮನವ ॥೪೫॥

ಲಲನೆಯಿಲ್ಲದೆ ಬೇರೆ ರತ್ನವು ।
ದೊರೆಯಲಾರದು ಕಬಿರಸಾಧುಗೆ ।
ಚೆಲುವೆಯೇತಕೆ ತಿರುಕಗೀತಗೆ ಸುಖವ ಪಡಗುಹಗೆ ॥
ಚೆಲುವನುರೆ ಸಿಂಗರಿಸಿ ಸುಂದರ ।
ಲಲನೆಯನು ನಾಂ ಸುಖಿಸಿ ನಲಿಯುವೆ ।
ಚೆಲುವೆಯೊಳಗಂಗವನು ಮನದೊಳು ಚಿಂತಿಸುತ್ತಿರಲು ॥೪೬॥

ಕೊಡುವೆ ನತುಳೈಶ್ವರ್ಯ ಕಬಿರಗೆ ।
ಕೊಡಲು ಸತಿಯಳ ನೆನ್ನ ಭೋಗಕೆ ।
ಕೊಡುವೆ ಧನಕನಕಾದಿವಸ್ತುವ ರಾಮಕಾರ್ಯಕ್ಕೆ ॥
ಕೊಡೆನು ಬಿಡದಿರೆ ಸತಿಯು ನೆನ್ನೊಳು ।
ಬಿಡನು ಕಬಿರನು ಕೊಟ್ಟೊಡಲ್ಲದೆ ।
ಕೊಡಲಿ ಪ್ರೀಯಳ ನೆನ್ನ ತೋಷಕೆ ಹಟವ ಹಿಡಿಯುವೆನು ॥೪೭॥

ಇಂತು ಯೋಚಿಸಿ ನೋಡಿ ಕಬಿರನೆ ।
ಕಂತುಜನಕನ ಭಕ್ತ ಕೊಡುವೆನು ।
ಚಿಂತೆಮಾಡದೆ ಕೊಡುವೆಯಾದೊಡೆ ನಿನ್ನ ರತ್ನವನು ॥
ಕಂತುಜನಕನ ನಾಮ ವೆಸಗಿ ।
ನ್ನೆಂತು ಬಾಳ್ವುದು ಬೇಡ ಕೊಡುವ್ರೊಡೆ ।
ಕಾಂತೆಯನು ನೀನೆನ್ನ ಸೌಖ್ಯಕೆ ಕೊಡುವೆ ಧನರಾಶಿ ॥೪೮॥

ಕೇಳಿ ಮಾತನು ಕಬಿರ ನಗುತಲಿ ।
ಹಾಳು ದೇಹದ ಚೆಲುವಿಕೆಗೆ ನೆರೆ ।
ಹಾಳು ಮೋಹಕೆ ಸಿಲುಕಿ ಕಾಪಿಸಿ ಮೋಸಹೋಗುವನು ॥
ಕೇಳಿ ಕೊಡುತಿರೆ ರಾಮನಾಮವ ।
ನಾಳಲಾರದೆ ಬಿಡುವ ಮನುಳನು ।
ಮೇಲುಪುಣ್ಯದೊಳುಳಿಸಿಕೊಂಬೆನು ರಾಮಮಂತ್ರವನು ॥೪೯॥

ಕೊಟ್ಟಿನಾದೊಡೆ ರಾಮನಾಮವ ।
ಬಿಟ್ಟದೆಂತುಟು ಬದುಕಬಲ್ಲೆನು ।
ಬಿಟ್ಟು ರಾಮನ ದಿವ್ಯಮಂತ್ರವ ನಾನು ಬುವಿಯೊಳಗೆ ॥
ಕೊಟ್ಟುಬಿಡುವೆನು ಸತಿಯ ಚೆಲುವನು ।
ಕೆಟ್ಟ ದೇಹವ ನೆಮ್ಮಿ ಸುಖವನು ।
ಸುಟ್ಟುಕೊಳ್ಳುವಸಿವನು ತಿಳಿಯದೆ ಎಂದ ಮನದೊಳಗೆ ॥೫೦॥

ಕಾಂತಿ ಜವ್ವನ ರೂಪ ಆತ್ಮನಿ ।
ಗೆಂತು ಬರುವುದು ದೇಹಕಲ್ಲದೆ ।
ಕಂತುವುವು ರೂಪಾದಿಗಳು ದೇಹವಿದು ಸವೆಯಲ್ಕೆ ॥
ಅಂತರಾತ್ಮನ ಬಗೆಯ ತಿಳಿಯದೆ ।
ಅಂತ್ಯವಾಗುವ ದೇಹದೊಳು ಬಲು ।
ಚಿಂತೆಯಿಡುತಲಿ ಮೋಹಜಾಲದಿ ಸಿಕ್ಕಿ ನೆರಳುವರು ॥೫೧॥

ಇರಲಿ ಕೊಡುವೆನು ಸತಿಯ ನೀತಗೆ ।
ಹರಿಯ ಸೇವೆಗೆ ಧನವ ನೀಯಲು ।
ಹರಿಯು ಭಕ್ತರ ಕಾಯ್ದುಕೊಂಬನು ಬಿಡಿಸಿ ಮಾಯೆಯನು ॥
ಹರಿಯು ಕಾವನು ಸತಿಯ ಸತ್ವವ ।
ಹರಿಸಮರ್ಪಣೆ ಮಾಡಿ ಕೊಡುವೆನು ।
ಪರನು ಪಾತಿವ್ರತ್ಯ ಬೀಬಿಯ ನಿವನು ಬಯಸುತಿರೆ ॥೫೨॥

ರಾಮಮಹಿಮಾ ನಾಮ ಬೇಡೈ ।
ಕಾಮಿನಿಯು ನಿನಗೀವೆ ಮುದದೊಳು ।
ರಾಮನಾಮದ ಮಹಿಮೆ ಯರಿಯದೆ ಬಿಡುವೆ ಮೋಸದೊಳು ॥
ಕಾಮಿನಿಯ ನೀ ಮೋಹಿಸಿದೆ ಬಲು ।
ಕಾಮಪೀಡಿತನಾಗಿ ಕೊಡುಧನ ।
ರಾಮಕಾರ್ಯಕೆ ಭಕ್ತಿಯಿಂದಲಿ ಸತಿಯ ಸ್ವೀಕರಿಸಿ ॥೫೩॥

ಎನಲು ಬಲುಮುದದಿಂದ ಸೇಠನು ।
ಧನಕನಕ ದಿವ್ಯಾಂಬರಾದಿಗ ।
ಳನುನಯದಿ ಕೊಟ್ಟಾಗ ಬೀಬಿಗೆ ಪೊಳೆವ ಸೀರೆಗಳ ॥

ಘನತರದ ಮಾಲೆಗಳ ನಿತ್ತನು ।
ಕನಕಮಯ ಜರತಾರಿ ಸೀರೆಯ ।
ಧನಸಹಿತ ತಂದಿತ್ತ ಶೀಘ್ರದಿ ಸತಿಯ ಕರೆತರಲು ||೫೪||

ರಾಮಭಕ್ತಾಗ್ರಣಿಯು ಹಿಗ್ಗಿದ ।
ರಾಮಕಾರ್ಯವು ನಡೆವುದೆನ್ನುತ ।
ಕಾಮಿನಿಯ ಯೋಚನೆಯ ಬಿಟ್ಟನು ನಡೆದ ನಿಜಗೃಹಕೆ ||
ಕಾಮಪರವಶನಾಗಿ ಸೇಠನು ।
ಕಾಮಿನಿಯ ರೂಪವನೆ ನೆನೆಯುತ ।
ಆ ಮನುಜ ಕುಳ್ಳಿರ್ದ ಲಲನೆಯ ನಿದಿರುನೋಡುತಲಿ ||೫೫||

ತಂದು ಧನರಾಶಿಯನು ಕಬಿರನು ।
ಮಂದಗಮನೆಯ ಕರೆದು ತೋರಿದ ।
ನಿಂದಿರಾಪತಿ ಭಜನಕಾರ್ಯಕೆ ಸುಲಭವಾಯ್ತೆಂದು ||
ಇಂದು ಕೊಟ್ಟರದಾರು ದ್ರವ್ಯವ ।
ಸುಂದರಾಂಗನ ಪೂಜೆಗೋಸುಗ ।
ಬಂದು ಸಲಹಲಿ ರಘುಪ ನವರನು ಮೋಕ್ಷವೀಯುತಲಿ ||೫೬||

ರಮಣ ಕೊಟ್ಟರದಾರು ಮುದದೊಳ ।
ಗಮಿತ ಧನವನು ಏನನೊತ್ತೆಯ ।
ನಾ ಮಹಾತ್ಮನೋಳರಿಸಿ ತಂದಿರಿ ನೀವು ಪೇಳೆನಲು ||
ನಮಗೆ ಮೊರೆವುದದೇನು ? ನೀಡಲು ।
ವಿಮಲ ರಾಘವನಾಮ ವೀಮಲು ।
ಕುಮತಿ ಬೇಡೆನೆ ನಿನ್ನ ನಿತ್ತೆನು ರಾಮಧನಕಾಗಿ ||೫೭||

ನೀನೆ ಧನ್ಯಳು ಜಗದಿ ಪಾವನೆ ।
ನೀನೆ ಪೂಜ್ಯಳು ನಿತ್ಯ ವಂದ್ಯಳು ।
ನೀನೆ ಪಾವನರೂಪೆ ಸುಚರಿತೆ ನೀನೆ ಬಲುಧನ್ಯೆ ||
ನೀನು ದೇಹವಕೊಟ್ಟು ಪೊಂದುವೆ ।
ಗಾನಲೋಲನ ಚರಣಸೇವೆಯ ।
ನಾ ನರೋತ್ತಮಗಿತ್ತು ಬಯಸಲು ನಿನ್ನ ಕೇಳಿದೊಡೆ ||೫೮||

ರಾಮಕಾರ್ಯಕೆ ನಿನ್ನ ನಿತ್ತೆನು ।
ರಾಮನಾಮವ ನೊಲ್ಲೆನೆಂದನು ।
ರಾಮನಾಮಕು ನೀನೆ ಮಿಗಲಿಪೆ ನೀನ ಹೇಳುವೆನು ॥
ಕಾಮಿಸುತ್ತಲಿ ನಿನ್ನ ನಿತ್ತರೆ ।
ರಾಮಧನವನು ಕೊಡುವೆನೆಂದನು ।
ರಾಮ ಸಲಹುವ ನಿನ್ನ ಸತ್ವವ ಹೋಗು ನೀನೆಂದ ॥೫೯॥

ಎನ್ನ ದೇಹವ ಬೇಡವೆಂದನು ।
ನಿನ್ನ ಕುವರನು ಕಮಲನೆಂತಕೆ ।
ನಿನ್ನ ರಘುಪತಿ ನಾಮ ವೇತಕೆ ಬೇಡವೆನಗೆಂದ ॥
ನಿನ್ನ ಸತಿಯಳ ನೆನ್ನ ಭೋಗಕೆ ।
ಮುನ್ನ ಕೊಟ್ಟರೆ ಧನವ ಕೊಡುವೆನ ।
ಲೆನ್ನಲಾತಗೆ ನಿನ್ನ ನೀಯುತ ಧನವ ತಂದಿಹೆನು ॥೬೦॥

ಖೇದ ಪಡದಿರು ರಮಣಿ ಮನದೊಳು ।
ಸಾಧುಸಂತರ ಸೇವೆಗೋಸುಗ ।
ಸಾಧುಶರಿರವ ನಿಡುವೆ ತುಳಸೀದಾಸ ಸೇಂತನಿಗೆ ॥
ಸಾಧುಸೇಂತನ ಮನವ ನೋಲಿಸುತ ।
ಸಾಧುವಾಗಿರು ನೀನು ಮಾನಿನಿ ।
ಮಾಧವಾಂಘ್ರಿಯು ಮರೆಯಬೇಡೌ ನೀನು ಪೋಗೆಂದ ॥೬೧॥

ನಿನ್ನ ಸಲಹಲಿ ರಾಮ ಚಂದ್ರನು ।
ನಿನ್ನ ಪಾತಿವ್ರತ ಮಹಿಮೆಯು ।
ನಿನ್ನ ಸತ್ವವ ಕಾಯುತಿರಲಿಕೆ ಭೀತಿ ಬಿಡು ರಮಣಿ ॥
ನಿನ್ನ ಮನದೊಳು ರಾಮ ನಲಿಯಲಿ ।
ನಿನ್ನ ಭಕ್ತಿಯು ಉಕ್ಕಿ ಹರಿಯಲಿ ।
ನಿನ್ನ ಮಹಿಮೆಯು ಬಿಕಿ ಬೀರಲಿ ಜಗದಿ ತೆರಳೆಂದ ॥೬೨॥

ಮನದೊಳಳುಕಿದಳಾಗ ಮಾನಿನಿ ।
ತನಗೆ ನಿಂದುಡೆ ಅನ್ಯಪುರುಷನ ।
ನನಿಯುನೆನುತ ಮನದಿ ಮರುಗಿದಳಾಕೆ ಕೊರಗುತಲಿ ॥

ಇನಿಯನಂಘ್ರಿಯ ತೊರೆದು ಪೋಗಲು ।
ಮನವು ಬಾರದೆ ದುಃಖಿಸುತ್ತಲಿ ।
ಕ್ಷಣದಿ ಬಿದ್ದಳು ಭೂಮಿಗೊರಗುತ ಮೂರ್ಛೆಯಲಿ ತರಳೆ ॥೬೩॥

ಬೀಸಿದನು ಗಾಳಿಯನು ಕಬಿರನು ।
ಸೂಸಿ ತಣಿನೀರ್ಗಳನು ಸಗುಳದಿ ।
ಘಾಸಿಯಾದನು ನೋಡಿ ಸತಿಯಳ ಪರಿಯ ನವನಾಗ ॥
ಮೋಸಹೋಗಲುಬೇಡ ನೀ ನಲೆ ।
ಘಾಸಿಯಾಗುವೆ ಮೋಹವಿಡುತಲಿ ।
ತ್ರಾಸಪಡುವೆ ದೇಹದೊಳು ಬಿಡು ಮೋಹಮಮತೆಯನು ॥೬೪॥

ನಿನಗೆ ದೇಹದ್ವಿಮೋಹವಿರೆ ನಾ
ನನಗೆ ರಾಮೋತ್ಕರ್ಷವಸಿಲಿಸುವೆ ।
ಧನವ ನೀಯುವ ನೀರ ಬಿಡುತಲಿ ನಿನ್ನೊಳಾಸೆಯನು ॥
ಜನಕೆ ಬಿಡುಬಿಡು ಶೋಕಮನವನು ।
ಕೊನೆಯ ನಿರ್ಮಲಗೈದು ತಿಳಿತಿಳಿ ।
ನಿನಗೆ ಶೋಕವಿದೇಕೆ ಸುಂದರಿ ಯೋಗಿ ನೀನೆಂದ ॥೬೫॥

ರಾಮಮಂತ್ರವ ನೆನೆದು ತರುಣಿಯು ।
ರಾಮಕಾರ್ಯದ ನಿಲ್ಲಬಾರದು ।
ರಾಮಗರ್ಪಿತವಾಗಿ ದೇಹವ ಕೊಡುವೆ ಧನನಿಗೆ ॥
ರಾಮಸೇವೆಗೆ ಸಂದುಹೋದುದು ।
ರಾಮನಿತ್ತಿಹ ದೇಹ ಪಾವನ ।
ನಾ ಹಿಂತಿರುಗದಲ್ಲ ಧನ್ಯಳು ಎಂದಳಿಂದುಮುಖಿ ॥೬೬॥

ಉಡಿಸಿದನು ಪೀತಾಂಬರವ ವರ ।
ಒಡೆಯ ಸಿಂಗರಿಸಿದನು ಕಬಿರನು ।
ಕಡಗ ಕಂಕಣ ಗೆಜ್ಜೆಯಿಟ್ಟನು ಸತಿಗೆ ಮುದದಿಂದ ॥
ಮುಡಿಸಿ ಹೂಗಳ ತರುಣಿ ತುರುಬಿಗೆ ।
ಇಡುತ ತಿಲಕವ ಹಣೆಗೆ ಸೊಬಗೆನೆ ।
ಒಡೆದು ನಿಂದಳು ಬೀರಿ ರೂಪವ ತರಳೆ ಸೊಬಗಿನಲಿ ॥೬೭॥

ಕಮಲಲೋಚನೆ ತೊಳಪ ನಾಸಿಕ ।
ದಮಿತ ಸುಂದರವದನೆ ಮೋಹನೆ ।
ವಿಮಲಮಾನಸೆ ರಾಮಭಕ್ತಳು ರೂಪರಾಶಿಯಲಿ ॥
ಕಮಲಮುಖಿ ಶೋಭಿಸುತ ನಿಂದಳು ।
ಕಮಲನಾಭನ ಚಿಂತಿಸುತ್ತಲಿ ।
ನಮಿಸಿದಳು ಪತಿಚರಣಯುಗ್ಮಕೆ ಪರಮಭಕ್ತಿಯಲಿ ॥೧೮॥

ಕತ್ತಲಾದುದು ಕಾಂತೆ ನಡೆಯಲು ।
ಮತ್ತೆ ಮಳೆ ಬರುತಿಹುದು ಮಾರ್ಗವು ।
ಸುತ್ತ ತುಂಬಿದೆ ಕೆಸರಿನಿಂದಲಿ ನಡೆಯೆ ಕರ್ಕಶವು ॥
ಎತ್ತಿಕೊಂಡೆನು ನಿನ್ನ ಹೆಗಲೊಳ್ ।
ಗೊತ್ತು ಬರುವೆನು ನಿನ್ನ ನಾತಂ ।
ಗಿತ್ತು ಬಾರೌ ರಮಣಿ ಪೊರಮಡು ನೀನು ಬಾರೆಂದ ॥೧೯॥

ಮುಂದೆ ನಡೆದ ಕಮಾಲಕುವರನು
ತಂದು ತೋರುತ ಜೇಕ ಕಬಿರಗೆ ।
ಇಂದುಮುಖಿಯನು ಹೆಗಲೊಳೇರಿಸಿ ಬಂದ ಸಮಯದಲಿ ॥
ಬಂದ ಕಬಿರನ ಕಂಡು ಸೇಠನು ।
ನಿಂದು ಪೀಠವಕೊಟ್ಟು ಕೂರಿಸಿ ।
ತಂದು ಕೊಟ್ಟನು ಧನದರಾಶಿಯ ನತುಳ ಮುದದಿಂದ ॥೨೦॥

ಬಿಟ್ಟು ಸತಿಯುಕ ಕಬಿರ ಪೊರಡಲು ।
ಕೆಟ್ಟೆನೆನುತ ತರಣಿ ಜೊರಗಲು ।
ಕೊಟ್ಟ ಕ್ರಯನು ರಾಮ ನಲಹುವ ನಿನ್ನ ನಡೆಯಿಂದ ।
ಬಿಟ್ಟಲನ ನಿಂ ಮರೆಯಬೇಡೌ ।
ಬಿಟ್ಟಲಾಗದು ನಿನ್ನ ರಘುವರ ।
ಕೊಟ್ಟು ದರ್ಶನ ಪೊರೆವನೆಂದನು ಕಬಿರ ಸತಿಯಳಿಗೆ ॥ ॥೨೧॥

ಸತಿಯುವೊಲಿನ ಮೋಹಮೊಲಿಸುತ ।
ಸುತನ ಕರೆವು ಕಬೀರ ನಡೆದನು ।
ಹಿತದಿ ಸಂತನ ಕಾಣಲೋಸುಗ ಹರಿಯ ನೆನೆಯುತಲಿ ।

ಸತಿಸುತರ ಮೋಹಾದಿಗಳ ಮರೆ ।
ಯುತಲಿ ಮನದೊಳು ರಾಮನಂಘ್ರಿಯು ।
ಸ್ತುತಿಯ ಗೈಯುತ ರಾಮಸೇವಾಕಾರ್ಯಕನುವಾದ ||೭೨||

ತೊಡಗಿದನು ರಾಮೋತ್ಸವವ ಬಲು ।
ಜೊಡಗಿನಿಂದಲಿ ಸಾಧುಸಂತರ ।
ಗಡಣ ನೆರೆಸುತ ರಾಮನಾಮವ ಪಾಡಿ ಕೊಂಡಾಡಿ ||
ಬಿಡದೆ ನಿಶಿದಿನ ಭಜನೆಗೈಯುತ ।
ಕೊಡುತ ಲಶನವ ಸಕಲ ಜನರಿಗೆ ।
ಕಡಲಶಯನನ ಜನನದಿವಸವ ನಡೆಸಿ ವಿಭವದಲಿ ||೭೩||

ರಾಮನವಮಿಯ ದಿವಸ ಜನನವ ।
ರಾಮಶಯನೋತ್ಸವವ ನಡೆಸುದು ।
ರಾಮಚಂದ್ರನ ಸಕಲ ವೈಭವದಿಂದೆ ಪೂಜಿಸುತೆ ||
ರಾಮನಾಮದ ಮಹಿಮೆ ಯರುಹುತ ।
ರಾಮ ಸೀತಾ ರಾಮ ಸೀತಾ ।
ರಾಮ ನೆನ್ನುತ ಪಾಡಿ ಕುಣಿಯುತ ನಲಿದ ರಸರಂದು ||೭೪||

ಬೆಳಗಿದವ ದೀಪಗಳು ವಿಧನಿಧ ।
ಮೊಳ ಗಧಿಕತರ ವಾದ್ಯಘೋಷಗ ।
ಳೆಸಗೆಯ ಬಾಲಕರು ಮೆರೆದರು ಭಕ್ತಸಾಗರವ ||
ಮೊಳಗಿದುವ ನಿಸಸ್ವಳತತಿಗಳು ।
ತೊಳಗಿ ಬೆಳಗಿತು ರಾಮಪೂಜನ ।
ಹೊಳೆವ ರಂಜಿಸ ಚಿತ್ರಮಂಟಪದಲ್ಲಿ ಥಳಥಳನೆ ||೭೫||

ರಾಮನಾಮವೆ ಕೇಳಬರುತಿರೆ ।
ರಾಮನಾಮವ ಕಾನಿಸುತ್ತಲಿ ।
ಕಾಮಿಸೀಜನರೆಲ್ಲ ನೆರೆದರು ಬಂದು ಮಂಟಪಕೆ ||
ರಾಮನಾಮವೆ ಘೋಷವಾದುದು ।
ರಾಮಮಂತ್ರವೆ ಜಗವ ಮುಚ್ಚಿತು ।
ರಾಮಮಯನಾಯಿತ್ತು ದೆಸೆದೆಸೆಯೆಲ್ಲ ವೈಭವದಿ ||೭೬||

ಸಾಧುಸಂತರು ಪರಸಿ ಕಬಿರನ |
ಮಾಧವಾಂಘ್ರಿಯ ಭಜನೆ ಗೈಯುತ |
ಮೋದದಿಂದಲಿ ರಾಮಕೀರ್ತನಮಾಡಿ ನಲಿಯುತಿರೆ ||
ಸಾಧುಕಬಿರನು ತೊರೆದು ಮೋಹವ |
ಸಾಧುವಾದನು ರಾಮವಿಠಲನ |
ಪಾದಯುಗಳವ ನೆನೆದು ಸ್ತುತಿಸುತ ನಲಿಯುತಿರುತಿಹನು ||೨೭||

ಸಂಧಿ ೪ ಪದ್ಯ ೨೯೦ ಕ್ಕೆ ಮಂಗಳಮಸ್ತು

# ಐದನೆಯ ಸಂಧಿ.

ಸೂ॥ ಕಾಮ ಮೋಹಾದಿಗಳ ಜಯಿಸುತ ।
ರಾಮನಾಮವ ನಂಬಿ ಸೇಠನು ।
ರಾಮಭಕ್ತಿಳ ಕೊಟ್ಟು ಕಬಿರಗೆ ನಲಿದ ಭಜನೆಯೊಳು ॥

ಇತ್ತ ಬೀಬಿಯು ಪತಿಯ ಗುಣವನು ।
ಚಿತ್ತಶುದ್ಧಿಯೊಳಧಿಕ ಭಕುತಿಯೊ ।
ಳುತ್ತಮಾಂಗವ ಜಾಸಿಸುತ್ತಿರೆ ಸಾಹುಕಾರ ಬಲು ॥
ಚಿತ್ತವೈಕಲ್ಯವನು ಪೊಂದುತ ।
ಮತ್ತನಾದನು ನೋಡಿ ರೂಪವ ।
ಮತ್ತೆ ಬಂದನು ತರಳೆಯೊಡನೆಯೆ ಶಯನಮಂದಿರಕೆ ॥೧॥

ಬಗೆಬಗೆಯ ಪರಿಮಳದ್ರವ್ಯವ ।
ನೊಗುಮಿಗೆಯೊಳಿರಿಸುತ್ತ ಮೋಹದಿ ।
ನಗುತ ನಗಿಸುವ ವಸ್ತುಜಾಲದಿ ಶಯನಮಂದಿರವ ॥
ಮಿಗಿಲೆನುತ ಸಿಂಗರಿಸಿ ಸೆಜ್ಜೆಗೆ ।
ಮುಗುಧನಾಗುತ ಕಾಮಪರವಶ ।
ನಾಗಿ ತರಳೆಯ ಕರೆದು ದುರುಳನು ವಿಕಟನೋಟದಲಿ ॥೨॥

ನೋಡಿದನು ರೂಪವನು ಸೇಠನು ।
ಜೋಡಿದನು ಸೆರಗೊಡ್ಡಿ ತರಳೆಯ ।
ಕಾಡಿದನು ಬಲುಬಳಲಿ ಸುಮಶರಹತಿಗೆ ಬಲುನೊಂದು ॥
ಬೇಡಿ ಬಿದ್ದನು ಕಾಲಿಗೆರಗುತ ।
ಓಡಿ ಹಿಡಿದನು ತರಳೆ ತುರುಬನು ।
ನೋಡಿ ಮುಖವನು ಮುಗುಧನಾದನು ತರುಣಿ ಚೆಲ್ವಿಕೆಗೆ ॥೩॥

ತಿಳಿಯದಾದನು ಬೀಬಿ ಮಹಿಮೆಯ ।
ನಿಳಿದುಹೋದನು ಕಾಮಶರಧಿಗೆ ।
ಕಳಿದುಬಿಟ್ಟನು ಮಾನವೆಲ್ಲವ ತಾನು ತನುಮರೆತು ॥
ಬಳಿಗೆ ಕರೆದನು ತರುಣಿಯನು ತಾ ।
ಸಿಲಲು ಸಹಿಸದೆ ರಾಮಬಾಣಕೆ ।
ಲಲನೆಯೊಳು ಸಂಭೋಗದಾಸೆಯನಿಟ್ಟು ಕರೆಯುತಿರೆ ॥೪॥

ಮನದಿ ಧೈರ್ಯ-ವತಂದು ಬೀಬಿಯು ।
ಮನದ ಯೋಚನೆ ಮರುತಿ ಬಿಡುಬಿಡು ।
ಸಸಿಯಕ್ಕೆತರಬೇಡ ವೆನ್ನಯ ವ್ರತವ ನೀಸರಿಯೆ ॥
ಅನಘ ನೀ ಕೆಡಬೇಡ ಕೆರಳಿಸಿ ।
ಘನಕಬೀರನ ಸತಿಯು ವ್ರತವ ।
ನ್ನಿಸಿತು ನೋಯಿಸಬೇಡ ಬಿಡು ಮರುಳೆಂದಳೀಮುಮ್ಮುಖಿ ॥೫॥

ಕಾಮಮೋಹಾದಿಗಳ ಬಿಡುಬಿಡು ।
ಕಾಮಿಸುತ್ತಲಿ ಹರಿಯ ಪಾದವ ।
ರಾಮನಾಮವ ಜಪಿಸು ಬಿಡುತಲಿ ಜಗದಿ ಮೋಹವನು ॥
ಈ ಮಹೀತಲದಲ್ಲಿ ಕೆಡುವನು ।
ಕಾಮದಿಂದಲಿ ಮೋಹನಿಡುತಲಿ ।
ಕಾಮಿನೀಯರ ವ್ರತವ ಕೆಡಿಸುತ ಸಿಲುಕಿ ಪಾಪಕ್ಕೆ ॥೬॥

ಧನವ ಗಳಿಸಿಹೆ ನೀನು ಪಾವನ ।
ಜನವ ತಣಿಸುತ್ತನವಿಡುತಲಿ ।
ತನುಮನವ ನಪಿ-ಸುತ ಶ್ರೀಪತಿ ಸೇವೆಗೆನ್ನುತಲಿ ॥
ಕೊನೆದು ಮನವನು ನೋಡು ನಿನ್ನನು ।
ಅನುದಿನದಿ ಹರಿನಾಮ ಭಜನೆಯ ।
ನನುನಯದಿ ಗೈಯುತಲಿ ಪ್ರಾಣವ ಗಳಿಸು ಭರದಿಂದ ॥೭॥

ತ್ಯಜಿಸೆಲ್ಲ ಮೋಹವನು ಜಗದೊಳು
ತ್ಯಜಿಸು ಕಾಮವ ಕಾಮಿನಿಯರೊಳು ।
ತ್ಯಜಿಸು ಕ್ರೋಧಾದಿಗಳ ಬೇಗನೆ ಪರಸ್ತ್ರೀರತಿಯನು ॥

ಭಜಿಸು ರಾಮನ ಸಾರ್ವಕಾಲದಿ ।
ಭಜನೆ ಬಿಡದಿರು ಶಯನಕಾಲದಿ ।
ಅಜಿತನಾಗುವೆ ನೀನು ಸೇರಸೆ ಜಗದಿ ಪಾವನನು ||೮||

ಮನದ ಮೋಹಾತುರದಿ ಸೇರನು ।
ಮುನಿಸ ತಡೆಯುತ ನೋಡಿ ತರಳೆಯು ।
ತನುಮನವ ನಿನಗಿತ್ತಿಹೆನು ಮಾನಿಸಿ ನೀನು ಕೊಡು ಸುಖವ ||
ಎನಿತು ಸಹಿಸಲಿ ನಿನ್ನ ಮೋಹವ ।
ಮುನಿಯಬೇಡೌ ತರುಣಿ ರೂಪವ ।
ನಿಸಿತು ನಿಷ್ಠುರ ಗೈಯ್ಯಬೇಡೌ ನೋಡು ನೀನೆಂದ ||೯||

ನಿನ್ನ ಪುಣ್ಯದಿ ನಾನೆ ಬಂದಿಹೆ ।
ನಿನ್ನ ಸುಕೃತವ ನೇನ ಪೊಗಳಲಿ ।
ನಿನ್ನ ಮೋಹನ ವದನಲಾಗಕೆ ನೆಚ್ಚಿ ಕೊಲಿದಿಹೆನು ||
ನಿನ್ನ ವೇದಾಂತವನು ಕೇಳಿನು ।
ನಿನ್ನ ಸೇರುತ ಸುಖಿಸಬಂದಿಹ ।
ನಿನ್ನ ಯೋಚನೆಯೇಕೆ ಮಾನಿಸಿ ನೀಡು ಸುಖವೆಂದ ||೧೦||

ನಾರಿ ನೀ ನೊಲಿದಿತ್ತು ಸುಖವನು ।
ಮೋರೆ ತೋರಿಸು ನನ್ನ ಸೌಖ್ಯಕೆ ।
ನಾರಿ ತೋರಿಸು ಕಾಮಸಾಧನೆಗೀಗಳಿಂದುವುಸು ||
ನಾರಿಜಾರೌ ಜಗ ಸಜ್ಜಿಗೆ ।
ಬೀರುತಿಹುದೀ ಗಂಧಪುಷ್ಪವು ।
ತೋರುತಿರ್ಪ ಕಾಮವಿಕಸಿತನಾಗಿ ನೋಡೆಂದ ||೧೧||

ಕೆಡುವೆ ಕೆಡಿಸುತಲೆನ್ನ ವ್ರತವನು ।
ಬಿಡದು ಕೆಡಹುವ ನಿನ್ನ ರಘುವರ ।
ಕಡಿದು ಬಿಸುಡುವ ನಿನ್ನ ದೇಹವ ಕೀಚಕನ ತೆರದಿ ||
ತೊಡೆದು ಮೋಹವನಿನ್ನು ಮನದಿಂ ।
ತೊಡು ತೊಡೀಗಳೆ ರಾಮಜಪವನು ।
ಬಿಡದೆ ಭಜನೆಯ ಮಾಡು ಧನವನು ನೀಡು ಬಡವರಿಗೆ ||೧೨||

ತರುಣಿಯರ ಮೋಹಿಸುತ ಬುವಿಯೊಳು ।
ಮರಣಕೆಡೆಯಾಗಿಹರು ಸಂತತ ।
ದುರುಳ ಮರಣವ ಬಯಸಬೇಡೈ ಸಿಲುಕಿ ಮೋಹಕ್ಕೆ ॥
ಮರೆಯಬೇಡೈ ಕಂಸ ಕೀಚಕ ।
ಸುರಪ ರಾವಣ ನೃಪರಿಗಾಗಿಹ ।
ಪರಿಯ ಯೋಚಿಸಿನೋಡು ಮನದೊಳಗೆಂದಳಿಂದುಮುಖಿ ॥೧೩॥

ಮುನಿಸದಾಳ್ದನು ಸಾಹುಕಾರನು ।
ಮುನಿದು ಕಿಡಿಕಿಡಿಯಾಗಿ ಕೋಪದಿ ।
ಕ್ಷಣದಿ ಕೋಪಾತುರದಿ ಮರೆಯುತ ತನುಮನಾದಿಗಳ ॥
ನೆನೆದು ಕಾಮಿನಿ ರೂಪವನ್ನುರೆ ।
ಮನದಿ ಮೋಹಾವೇಶದಿಂದಲಿ ।
ಮುನಿದು ನಿಂದನು ತರಳೆಯಿದಿರಲಿ ಸೇಠ ಬೆದರಿಸುತ ॥೧೪॥

ಬರಲು ಮುನಿದೊಡೆ ನೋಡು ನಿನ್ನಯ ।
ಸೀರೆ ಸೆಳೆಯುತ ಕಷ್ಟವೀವೆನು ।
ಬರಿದೆ ಬಿಡುವವನಲ್ಲ ಬಾರೆಲೆ ತರುಣಿ ಛಲವ ಬಿಡು ॥
ಅರಿತಿಹೆನು ನಾನೀ ವಿರಾಗವ ।
ಪರಿಕಿಸಿಹೆನೀ ತತ್ವವೆಲ್ಲವ ।
ಸರಿಯಬೇಡೌ ರಮಣಿ ತೋರೌ ನಿನ್ನ ಸೌಖ್ಯವನು ॥೧೫॥

ಧನವ ನೀಡುತ ನಿನ್ನ ನೊತ್ತೆಯ ।
ನನುನಯದಿ ಪೊಂದಿಹೆನು ಪಡೆಯಲು ।
ಮನವ ಧೈರ್ಯವ ಬಿಡೆನು ನಿನ್ನನು ಬರಿದೆ ಪೋಗಲ್ಕೆ ॥
ತನುಮನಕೆ ಜನಜಗಕೆ ಹೆದರಿಕೆ ।
ಎನುವೆ ಬಿಡುಬಿಡು ಶಂಕೆ ಮಾನಿನಿ ।
ತನುವ ತೋರೌ ತಡೆಯಲಾರೆನು ಮೋಹ ತಾನೆಂದ ॥೧೬॥

ಏನ ಹೇಳಲಿ ನಿನ್ನ ಕುಮತಿಗೆ ।
ಮಾನಹೀನನು ಜ್ಞಾನರಹಿತನು ।
ಮಾನಿನೀಯರ ಮಾನಗೆಡಿಸುತ ನರಕಕ್ಕೈದುವೊಡೆ ॥

ಮಾನನಿಧಿ ರಘುರಾಮ ಕಾವನು ।
ಮಾನವೆನ್ನಭಿಮಾನವವನನು ।
ಕೇಣಮುಂ ಬಿಡು ಕೆಡುವೆ ಯೇತಕ್ಕೆಂದಳಾ ತರುಣಿ ||೧೭||

ತಡೆಯುಲಾರದೆ ಬಂದ ಕೋಪವ ।
ಪಿಡಿಯೆ ತರಳೆಯ ಮುಂದೆ ಬಂದನು ।
ಪಿಡಿದು ಓಡಿದನಾಗ ತರಳೆಯು ಬೆದರಿ ಭೀತಿಯಲಿ ||
ಓಡುತೋಡುತ ಸೋತುಹೋದಳು ।
ಬೇಡಿದಳು ರಘುರಾಮನನು ಬಲು ।
ಜೋಡಿಸಳು ಕೈಮುಗಿದು ಸಲಹಲು ತನ್ನ ಸತ್ವವನು ||೧೮||

ಜಾನಕಿಯ ಸಿರಿ ಕಾಯೊ ರಘುಪತಿ ।
ಮಾನ ನಿನ್ನದು ನಿನ್ನ ನಂಬಿದೆ ।
ಮಾನಿನೀಮಣಿ ನಿನ್ನ ಕಾವುದು ಜಯತು ಜಯರಾಮ ||
ಮಾನತೆಗೆವನು ದುರುಳನಿವ ಬಲು ।
ಹೀನಮಾನವ ಕಾಡುತಿಹನೀ ।
ಗೇನಮಾಡಲಿ ದೀನವತ್ಸಲ ಮಾನ ಕಾಯುವುದು ||೧೯||

ರಾವಣಾದ್ಯರ ಕೊಂದು ಧರಣಿಯ ।
ಪಾವನತ್ವವ ನುಳುಹಿ ಸಲಹಿದೆ ।
ಪಾವನಾತ್ಮರ ಸತ್ವ ವುಳುಹುತ ಜಗವ ತೋಷಿಸಿದೆ ||
ಆವಗಂ ಸಾಧುಗಳ ಹಿತವನೆ ।
ತೀವಿದತಿಶಯದಿಂದ ಮಾಡುವೆ ।
ಭಾವಿಸಲು ಭಕುತರನು ಸಲಹುವೆ ಮೋಕ್ಷನೀಯುತಲಿ ||೨೦||

ಸುರಸಸಂಗದಿ ಮೌನಿಶಾಪದ ।
ಗುರಿಗೆ ಸಿಲ್ಕಿದ ಸತಿಯ ಶೋಕಿತ ।
ಹರಿಸಿ ಶಾಪವ ಕರುಣವಿಡುತಲಿ ನೀಡುತಭಯವನು ||
ಧರಣಿಜೆಯಳನು ದುರುಳ ರಕ್ಕಸ ।
ರರಸ ಪಿಡಿಯಲು ಕಡಲ ದಾಂಟುತ ।
ಒರಸಿಬಿಟ್ಟೆಯೊ ರಾಕ್ಷಸಾನ್ವಯವನ್ನು ಕೋಪದಲಿ ||೨೧||

ವೈರಿಸೋದರನನ್ನು ಕ್ಷಮಿಸುತ |
ವೈರಿರಾಜ್ಯವನಿತ್ತೆ ಪದುಳದಿ |
ವೈರವೆಲ್ಲಿದೆ ನಿನಗೆ ಕರುಣಾಶರಧಿ ಪರಿಕಿಸಲು ||
ಭಾರಿಪದವಿಯನಿತ್ತೆ ರಾವಣ |
ಶೂರರಕ್ಕಸ ಕುಂಭಕರ್ಣಗೆ |
ಸಾರಿ ಬೇಡುವೆ ನಿನ್ನ ಪಾದವ ನಂಬಿ ರಘುರಾಮ ||೨೨||

ಅನಲಮುಖದಿಂ ಪರಿಕಿಸುತೆ ನೀ |
ನನಘೆ ಸೀತೆಯು ಮಹಿಮೆ ತೋರಿದೆ |
ವನಜನಾಭನೆ ನಿನ್ನ ನಂಬಿದಗುಂಟೆ ಭಯಭೀತಿ ||
ತನುಮನವ ನಿನಗರ್ಪಿಸಿದೆ ಜೀ |
ವನನು ನಿನಗಾಗೀಗ ಮಾನವ |
ಧನದ ಮದದಿಂ ಸೆಳೆಯುತಿರ್ಪನು ನೋಡು ಕರುಣದಲಿ ||೨೩||

ತನುವು ನಿನ್ನದು ಮಾನ ನಿನ್ನದು |
ಧನಕನಕ ಸಕಲತ್ವ ನಿನ್ನದು |
ಮನವು ನಿನ್ನದು ಲಜ್ಜೆ ನಿನ್ನದು ನಿಸ್ವತಂತ್ರಳುನಾ ||
ಮುನಿಯದೀಗಳೆ ಸಲಹದಿರ್ದೊಡೆ |
ತನುವ ಸೋಕುತ ನಿನ್ನ ಮಾನವ |
ಹನನಗೈಯುವನೀತ ಕತದಿಂದೋಡಿಬಾ ಬೇಗ ||೨೪||

ಏಕೆ ತಡಮಾಡುವೆಯೊ ರಘುಪತಿ |
ಕಾಕುಮನುಜನು ಹಿಂಸೆಕೊಡುತಿಹೆ |
ಏಕೆ ಬಾರದೊ ಕರುಣವೆನ್ನೊಳು ಬಾರೊ ವೈದೋರಿ ||
ನೂಕಲೇತಕೆ ದುರುಳಜನದೊಳ |
ಗೇಕೆ ಭಕ್ತರ ಕೆಡಹಿ ನೋಡುತ |
ಕಾಕುಕೃತ್ಯಕೆ ತೋಷಿಸುತ್ತಿಹೆ ರಾಮ ನೀ ಸಲಹು ||೧೫||

ಓಡಲಾರೆನು ನಡೆಯಲಾರೆನು |
ಬಾಡಿಹೋದುದು ನಡುವು ನಡೆಯಲು |
ನೀಡಲಾರವು ಪಾದಗಳು ಬಲು ನೋತುಹೋಗಿರಲು ||

ಜೋಡಿಸುತ್ತಲಿ ಕರವಮುಗಿವೆನು ।
ಓಡಿಬರುತಲಿ ದುರುಳನಿವನಿಗೆ ।
ನೀಡು ಸುಜ್ಞಾನವನು ಸೇವಗೆ ಕಾಯ್ದು ಸತ್ವವನು ॥೨೬॥

ಬಾಲೆ ದ್ರೌಪದಿ ಯೊರಲಲಕ್ಷ್ಯಯು ।
ಶಾಲೆಯನ್ನೊಲಿದಿತ್ತೆ ಮುದದಿಂ ।
ಪಾಲಿಸಿದೆ ವರವಿತ್ತು ತಾರೆಗೆ ಮೌನಿಸತಿಯಳಿಗೆ ॥
ನೀಲಮೇಘಶ್ಯಾಮ ನಿನ್ನಯ ।
ಜಾಲ ತೋರಲು ಸಮಯವಲ್ಲಿದು ।
ಪಾಲಿಸೆನ್ನನು ಬೇಗ ರಘುಪತಿ ಕರುಣಿ ದಾಶರಥಿ ॥೨೭॥

ನಿನ್ನ ನಾಮವೆ ಸಕಲಸಾಧನ ।
ನಿನ್ನ ಪೂಜೆಯೆ ಮೋಕ್ಷರತ್ನವು ।
ನಿನ್ನ ಕೀರ್ತನೆ ಸಕಲಸಂಪದ ನೀನೆ ಆನಂದ ॥
ನಿನ್ನನಂಬಿದಳೆನ್ನತೆರದೊಳು ।
ಧನ್ಯರಾರಿಹರಿನ್ನು ಜಗದಲಿ ।
ಮುನ್ನ ಪಾಲಿಪುದೆನ್ನ ಪಾತಿವ್ರತ್ಯವನು ಮುದದಿ ॥೨೮॥

ರಾಮನಂ ಜಾನಿಸುತ ನಿಂದಳು
ಕಾಮಿನೀಮಣಿ ಭಕುತಿಯಿಂದಲಿ ।
ರಾಮಪಾದವನಂಬಿ ಮನದೊಳು ಪರಮಪ್ರೀತಿಯಲಿ ॥
ರಾಮನೇ ಗತಿಯೆಂದು ಮೊರೆಯಿಡೆ ।
ರಾಮ ಧರಿಸುತ ರಾಜಭಟನಂ ।
ತಾ ಮಹಾತ್ಮನು ಬಂದು ನೂಕಿದ ಬಾಗಿಲನು ಭರದಿ ॥೨೯॥

ತೆರೆದು ಬಾಗಿಲ ಸಾರುಭಟೆಯಿಂ ।
ತೆರೆದು ಸೇವನ ಪಿಡಿದು ಝಡಿಯುತ ।
ಶಿರವ ಕುಕ್ಕುತ ಘಡಘಡೆಲವೋ ಬಡಿವೆ ನಿನ್ನನ್ನು ॥
ತರುಣಿಯಂ ಜೆಂಬತ್ತಲೇತಕೆ ।
ತರಿವೆ ನಿನ್ನಯ ಶಿರವ ನೀಗಲೆ ।
ಭರದಿ ಕಳುಹಿಸು ನಾರಿಯನು ಗೃಹಕೆಂದ ರಾಜಭಟ ॥೩೦॥

ನಡುಗಿದನು ಕಂಪಿಸುತ ಸೇಠನು ।
ಉಡುಗಿಹೋದನು ಭಯದಿ ಧರಣಿಗೆ ।
ಗದಗದನೆ ನಡುಗುತ್ತ ಬಿದ್ದನು ರಾಮನಂಘ್ರಿಯೊಳು ॥
ಕೆಡವಿದನು ದೇಹವನು ಬುವಿಯೊಳು ।
ಬೇಡುತಲಿ ಕ್ಷಮೆಯನ್ನು ರಘುವರ ।
ನಡಿಯ ಕೃಪೆಯನು ಬಯಸಿ ಸೇಠನು ಮರೆತು ಕಾಮವನು ॥೩೧॥

ರಾಮದರುಶನದಿಂದ ಸೇಠನು ।
ಕಾಮಕ್ರೋಧಾದಿಗಳ ಬಿಡುತಲಿ ।
ಕಾಮಿನಿಯ ಕಳುಹಲ್ಕೆ ನಿಶ್ಚಯಮಾಡಿದನು ಮನದಿ ॥
ಭಾಮೆ ಬೀಬಿಯ ಸೆಗಲೊಳೇರಿಸು ।
ತಾ ಮಹಾತ್ಮ ಕಬೀರನಿಳಯಕೆ ।
ನೇಮದಿಂದಲಿ ತಂದು ಬಿಟ್ಟನು ಪರಮ ವೈಭವದಿ ॥೩೨॥

ಧರಿಸಿ ಕಬಿರನರೂಪ ತನ್ನೊಳು ।
ಪರಮಪುಣ್ಯಶ್ಲೋಕರಘುನಂದನ ।
ಶಿರದೊಳಿರಿಸುತ ತಂದು ಕೊಟ್ಟನು ಸೇಠನಿಗೆ ಭರದಿ ॥
ಬರೆಸಿಕೊಂಡನು ಪತ್ರವನು ತಾ ।
ಸಿರಿಯುಷ್ಣೀ ಸೇರಿತೆನುತ್ತ ರಘುವರ
ತೊರಟುಹೋದನು ಮಾಯವಾಗುತ ಶೀಘ್ರದೊಳಗಿರದೆ ॥೩೩॥

ಇತ್ತ ಕಬಿರನು ಬಂದ ಸತಿಯಳ ।
ನೆತ್ತ ಬಂದೆಯೆನ್ನುತ್ತ ಕೇಳಲು ।
ಉತ್ತಮಾಂಗನೆ ರಾಜಧೂತನ ವರಿಯ ಪೇಳಲ್ಕೆ ॥
ತತ್ತರಿಸಿ ಮನದಲ್ಲ ಕಬಿರನು ।
ಪುತ್ತೆ ಹೊರಟನು ರಾಜಮೂತನ ।
ಕೃತ್ಯ ಕೇಳಲು ಕೋಪದಿಂದಲಿ ನಡೆದ ಜವದಿಂದ ॥೩೪॥

ಕರೆದು ಕೊತ್ವಾಲನನು ಕೇಳಿದ ।
ನರರೆ ನೀನೇಕೀಗ ಸೇಠನ ।
ಕರೆದು ಪೊಡೆಯುತ ಲೆಸ್ಸ ಸತಿಯಳ ತಂದು ಕಳುಹಿಸಿದೆ ॥

ಮರೆತುಹೋದುದೆ ನಿನಗೆ ಬುದ್ಧಿಯು ।
ಬರಿಯ ಕಾರ್ಯದ ಮದದಿ ನೀಚರ ।
ತೆರದಿ ಕಾರ್ಯವ ಗೈದುಬಿಡುವರೆ ಪೇಳು ನೀನೆಂದ ||೩೫||

ಎಲವೋ ಕಾರ್ಯಮದಾಂಧನಾಗುತ ।
ಮಲಿನಗೈದೆಯ ರಾಮಕಾರ್ಯವ ।
ಬಲದ ಮದದಿಂ ಸೇಠ ಸಾಧುವನೇಕೆ ಶಿಕ್ಷಿಸಿದೆ ||
ಲಲನೆಯಳ ನಾನಿತ್ತೆ ಸೇಠಗೆ ।
ಫಲವು ಬಂದುದೆ ನಿನಗೆ ಫಡಫಡ ।
ಖಳನೆ ಮಾಡಿದೆ ಘೋರಪಾತಕವೆನಗೆ ನೀನೆಂದ ||೩೬||

ಕೇಳುತಚ್ಚರಿಯಿಂದ ದೂತನು ।
ಕಾಳುವೋದುದೆ ಮತಿಯು ನಿನಗಿ ।
ನ್ನೇಳು ಕಾಣೆನು ನಿನ್ನ ಸತಿಯಳ ಸೇಠನಂ ಕಾಣೆ ||
ನೀಲಮೇಘಶ್ಯಾಮ ಸೇವೆಯು ।
ಕಾಳಸರ್ಪವು ನಿನ್ನ ಸುತ್ತಿರೆ ।
ಮೇಲನರಿಯದೆ ಗಳಹೆ ಬೇಡೆಲೆ ಪೋಗು ನೀನೆಂದ ||೩೭||

ಬಂದು ಸೇಠನ ಕಬಿರ ಕೇಳ್ದ ।
ನಿಂದು ಬಂದರದಾರಿದಿಲ್ಲಿಗೆ ? ।
ಬಂದು ನಿನ್ನನು ಪೊಡೆಯೆ ಧೈರ್ಯವೆ ರಾಜದೂತರಿಗೆ ||
ಇಂದು ಎನ್ನಯ ಸತಿಯು ಮಾಡಿದ ।
ಕುಂದುಗಳ ಮನ್ನಿಸುತ ಕಾವುದು ।
ತಂದೆ ಕರುಣದಿ ನೋಡು ನಮ್ಮನ್ನೆಂದ ಕವಿವೀರ ||೩೮||

ಮರುಳೆ ನಿನಗೇಂ ಕಬಿರ ಧನವನು ।
ಭರದಿ ನೀನೇ ತಂದು ಕೊಡುತಲಿ ।
ಬರೆದು ಪೊತ್ತಿಗೆಯಲ್ಲಿ ನೀನೇ ಬಂದು ಪೋದೆಯಲ||
ತೆರಳು ನೀ ಬೇಗದಲಿ ನಿಳಯಕೆ ।
ಬರಿದೆ ಬಳಲಿಸುತೆನ್ನ ಶೋಡಿಸದೆ ।
ಕರೆದು ರಾಜನ ಭಟನ ನೀ ತೊಲಗೆಂದ ತುಲಸೀಸೇಠ್ ||೩೯||

ಏನಿದಚ್ಚರಿಯೆಂಜೆ ದಾಸನೆ ।
ನಾನು ಕಾಣೆನು ರಾಜದೂತನ ।
ಏನು ಹೇಳುವೆ ಮರುಳುಮಾಡಲ್ಕೆನ್ನ ಬಳಲಿಸದೆ ॥
ಸಾನುರಾಗದಿ ಸತ್ಯಸಂಗತಿ ।
ಯೇನು ನಡೆದುದು ತಿಳುಹು ಬೇಗನೆ ।
ನಾನು ಕೊಟ್ಟೆನೆ ? ನಿನ್ನ ಧನವನ್ನೆಂದನಾ ಕಬಿರ ॥೪೦॥

ತಂದು ತೋರಿದ ಕಬಿರನಕ್ಷರ ।
ದಿಂದ ಬರೆದಿಹ ನೊಕ್ಕಣೆಯ ನಾ ।
ನಂದದಿಂದಲಿ ಕಂಡು ಕಬಿರನು ಮರೆತ ದೇಹವನು ॥
ಇಂದಿರಾಪತಿ ಮಾಯೆ ಗೈದಿಹ ।
ತಂದು ನೀಡಿದ ನಿನ್ನ ಧನವನು ।
ತಂದೆ ಕೊಟ್ಟನು ದಿವ್ಯದರುಶನ ನಿನಗೆ ಕೇಳೆಂದ ॥೪೧॥

ಸುಲಭದಿಂದಲಿ ರಾಮದರುಶನ ।
ಚೆಲುವಿನಲಿ ನೀಂ ಗೈದೆ ಕರುಣಾ ।
ಜಲಧಿ ತೋರಿದ ದಿವ್ಯರೂಪವ ನಿನಗೆ ಪದುಳದಲಿ ॥
ಒಲಿದನಾ ಹರಿ ನಿನಗೆ ಸುಲಭದಿ ।
ಒಲಿದು ನಿನ್ನಯ ದಾನಧರ್ಮಕೆ ।
ಒಲಿದು ನಿನ್ನಯ ಸರಳ ಮನಸಿಗೆ ರಾಮ ನೋಡೆಂದ ॥೪೨॥

ನೀನು ನೋಡಿದ ರಾಜದೂತನ ।
ನೀನು ಕಂಡ ಕಬೀರದಾಸನ ।
ಏನ ಹೇಳ್ವೆ ರಾಮನಲ್ಲದೆ ಬೇರೆಯುವರಲ್ಲ ॥
ನೀನು ನೋಡಿದೆ ರಾಮರೂಪವ ।
ಸಾನುರಾಗದೊಳಿರದುಬಾರಿಯು ।
ನಾನು ಕಾಣೆನು ರಾಮನಂಘ್ರಿಯು ತೋರು ನನಗೆಂದ ॥೪೩॥

ಅನಘ ಸೇಠನೆ ರಾಮಚಂದ್ರ ।
ನ್ನೆನಗೆ ತೋರ್ಪುದು ನಮಿಪೆ ನೀಗಳೆ ।
ಮನುಜವೇಷದ ರಾಜಭಟನಂ ತೋರು ಬೇಗದಲಿ ॥

ಮನವು ನಿಲ್ಲದು ರಾಮನಂಘ್ರಿಯು |
ಕಾಣದೀಗಳ್ ರಾಜದೂತನ |
ನನಘ ತೋರ್ಕೈ ನನಗೆ ಶೀಘ್ರದಿ ಮುದದಿ ನೀನೆಂದ ||೪೪||

ದೂತವೇಷವ ಕೊಂಡೆ ಸೇಠನು |
ಖ್ಯಾತಿಯಾದೊಡೆ ಧನವ ಪೊತ್ತೆಯೊಳ್ |
ಭೀತಿಪಡುತಲಿ ತಂದು ನೀಡಿದೆ ಕಬಿರ ರೂಪಿನಲಿ ||
ತಾತ ನೊಂದೆಯಾ ನನ್ನ ದೆಸೆಯಿಂ |
ಖ್ಯಾತಿವಂತನೆ ನಿನ್ನ ದರುಶನ |
ವೇತಕೀಗಲು ಕೊಡದೆ ಕಾಡುವೆ ತೋರು ಹರಿಯೆಂದ ||೪೫||

ಮರಣಸಮಯದಿ ಕೂಗಿದೊಡೆ ನೀ |
ಭರದಿ ಬರುತಲಿ ಪೊರೆದೆ ಅಜಮಿಳ |
ವರನ ಪದುಳದಿ ದುರುಳ ಮಕರಿಗೆ ನೊಂದ ಕರಿವರನ ||
ಸ್ಮರಿಸಿದೊಡೆ ನೀ ಸೀಳಿ ಮಕರಿಯ |
ದುರುಳ ದುಶ್ಶಾಸನನು ಸಬೆಯೊಳು |
ತರಳೆ ಕೃಷ್ಣೆಯ ಸೀರೆ ಸೆಳೆಯಲು ಮಾನವನು ಕಾಯ್ದೆ ||೪೬||

ಛಲದಿ ವಿಪಿನದಿ ತರಳ ಧ್ರುವತಾ |
ಸಲಹು ರಘುವರ ವಾಸುದೇವನೆ |
ಸಲಹು ಸಲಹೆನೆ ಭರದಿಂ ನೀ ನೊಲಿದಿತ್ತೆ ಘನಪದವಿ ||
ಲಲನೆ ಗೌತಮಸತಿಯ ಶಾಪವ |
ಕಳೆದು ದರುಶನವಿತ್ತೆ ಮುದದೊಳು |
ಶಿಲೆಯ ನಾರಿಯ ಗೈದ ರಾಮನೆ ಬಾರೊ ಕೈದೋರು ||೪೭||

ವೈರಿಸೋದರಗಧಿಕರಾಜ್ಯವ |
ನಾರುಕೊಟ್ಟರೊ? ಕೇಳಿ ತಿಳಿಯೆನು |
ವೈರಿ ರಾವಣ ಗಮಲಮುಕ್ತಿಯನಿತ್ತೆ ನೀ ನೊಲಿದು ||
ಮಾರುತಿಗೆ ಒಲಿದಿತ್ತೆ ನಿನ್ನನೆ |
ಬಾರಿಬಾರಿಗು ನಿನ್ನ ನಾಮವ |
ಸಾರುತಿರುತಿಹ ವಾಯುಸುತನಿಗೆ ನೀ ನನುಗ್ರಹಿಸಿ ||೪೮||

ಸುತ ಕಮಾಲಗೆ ಜೀವವಿತ್ತೆಯೊ ।
ಪತಿತಪಾವನ ರಾಜದೂತನ ।
ಮತವ ತಾಳಿದೆ ಸತಿಯ ಕಾಯಲು ಬಂದೆ ಜವದಿಂದ ॥
ಹಿತದಿ ಸೇಠಗೆ ಧನವನೀಯುತ ।
ಸತಿಯ ಕಳುಹಿಸಿ ನಿಳಯಕಾಗಲೆ ।
ಸತಿಗೆ ಸೇಠಗೆ ದಿವ್ಯದರುಶನವಿತ್ತೆ ನೀ ನೊಲಿದು ॥೪೯॥

ರಾಮಚಂದ್ರನೆ ನಿನ್ನ ನಂಬಿದೆ ।
ರಾಮ ನಿನ್ನಯ ನಾಮ ರಸವನು ।
ಕಾಮಿಸಿಹೆನಾ ಜಗದೊಳರಿಯೆನು ಮಿಕ್ಕ ವಸ್ತುಗಳ ॥
ರಾಮ ನೀನೆನಗತುಳರಾಜ್ಯವು ।
ರಾಮ ನೀನೇ ಸಕಲವಾಗಿರೆ ।
ರಾಮ ದರುಶನವೀಯದಿರುವುದು ತರವೆ ನಿನಗೆಂದ ॥೫೦॥

ಅಂದು ಕೌಶಿಕಮುನಿಯ ಯಾಗವ ।
ನಿಂದು ಕಾಯ್ದೆಯೊ ! ಶಿವನ ಧನುವನು ।
ತಂದೆ ಲೀಲಾಮಾತ್ರದಿಂದಲಿ ಮುರಿದೆ ಶ್ರೀರಾಮ ॥
ಮುಂದೆ ಘೋರಾರಣ್ಯದೊಳಗೈ ।
ತಂದು ಪೊರೆಯಲು ಭರದಿ ನೀ ಸುರ ।
ವೃಂದವನು ದಾನವರ ಕೈಯ್ಯಿಂ ಬಿಡಿಸಿ ಸಲಹಲ್ಕೆ ॥೫೧॥

ತೋರು ನಿನ್ನಯ ರೂಪ ರಘುಕುಲ ।
ಮಾರರೂಪನೆ ನಿನ್ನ ನೋಡುತ ।
ಘೋರಪಾಪವ ಕಳೆದು ಮಹದಾನಂದಗೊಳ್ಳುವೆನು ॥
ಬೇರೆ ಬೇಡೆನು ನಿನ್ನ ತಂದೆಯೆ ।
ಸಾರಿ ಬರುವುದು ಬೇಗ ನೀ ಮೈ ।
ದೋರಿ ಕಾವುದು ಕರುಣದಲಿ ನೀನೆಂದ ಕವಿವೀರ ॥೫೨॥

ಇಂತು ನಾನಾಸ್ತುತಿಯ ಗೈಯುತ ।
ಕಂತುಜನಕನ ಭಕ್ತ ಮರೆತನು ।
ಅಂತರಾತ್ಮನ ಚಿಂತೆಯಿಂದಲಿ ಬಾಹ್ಯಚಲನೆಗಳ ॥

ಚಿಂತಿಸಲು ಹರಿಯನ್ನೆ ಬಿಡದೆಯೆ ।
ಕಂತುಪಿತ ಬಹು ಪ್ರೇಮದಿಂದಲಿ ।
ನಿಂತು ತೋರಿದ ತನ್ನ ರೂಪವ ಕಬಿರಸಾಧುವಿಗೆ ||೫೩||

ಜಯತು ಕರುಣಾವನಧಿ ರಘುವರ ।
ಜಯತು ಸೀತಾರಮಣ ಮೋಹನ ।
ಜಯತು ಮೇಘಶ್ಯಾಮ ದಾನವವೈರಿ ವರಶೌರಿ ||
ಜಯತು ಜಾಹ್ನವಿ ಜನಕರಾಮನೆ ।
ಜಯತು ಕಪಿಕುಲರಾಜ ಮಿತ್ರನೆ ।
ಜಯತು ಸತ್ಯವ್ರತನೆ ಲಕ್ಷ್ಮಣವಂದ್ಯ ದಾಶರಥ ||೫೪||

ರಾಮರಾಮೆನ್ನುತ್ತ ಕುಣಿದನು ।
ರಾಮಭಜನೆಯ ಮಾಡಿ ಕಬಿರನು ।
ಕಾಮಜನಕನ ತೋರಿ ತನ್ನಯ ಮಿತ್ರ ಪರಿಜನಕೆ ||
ರಾಮಕಾಂತಿಯ ನೋಡಿ ಹಿಗ್ಗಿದ ।
ರಾಮಮಹಿಮೆಯ ಸೂರೆಗೊಂಡನು ।
ಕಾಮಿಸುತ್ತಲಿ ಹರಿಯಪಾದವ ವರದ ಕವಿವೀರ ||೫೫||

ಹರಿಯ ರೂಪವ ನೋಡಿ ನಲಿದನು ।
ಹರಿಯ ಚಲುವನು ತೋರಿ ಜನರಿಗೆ
ಹರಡಿ ರಘುಪತಿ ಮಹಿಮೆಯನ್ನರೆ ನಾಸ್ತಿಜನಜಗಕೆ ||
ಹರಿಯನೇ ಚಿಂತಿಸುತ ನಿಂದಿರೆ ।
ವರಪವಿತ್ರನ ನೋಡಿ ಸೋತನು ।
ಮರುಗಿ ತನ್ನಯ ಕುಹಕಬುದ್ಧಿಗೆ ಬೇಡಿದನು ಕ್ಷಮೆಯ ||೫೬||

ಭಕ್ತರೆಲ್ಲರ ಪರಮಪಿತಾ ಹರಿ ।
ಎತ್ತಿ ಕಬಿರನ ನಪ್ಪಿಕೊಂಡನು ।
ಉತ್ತಮಾಂಗನು ಪರಮಾದಚ್ಚರಿ ತೋರಿ ಜಗಕೆಲ್ಲ ||
ಭಕ್ತವೃಂದಕ್ಕಭಯಹಸ್ತವ ।
ಮತ್ತೆ ತೋರುತ ಮಾಯವಾದನು ।
ತೆತ್ತಿ ದೇಹವ ಕಬಿರ ಹರಿಯೊಳು ನಲಿದ ಶರಣೆಂದು ||೫೭||

ಸೂರೆಗೊಟ್ಟನು ತನ್ನ ಧನವನು ।
ಸೇರಿಬಿಟ್ಟನು ಕಬಿರವೃಂದದಿ ।
ಮಾರಜನಕನ ನಾಮಸುಧೆಯನು ಪಾನಮಾಡಲ್ಕೆ ॥
ಶೂರ ತುಲಸೀದಾಸಸೇಠನು ।
ಸಾರಿ ಬೇಡಿದ ಮೋಕ್ಷಭಿಕ್ಷೆಯ ।
ಶೌರಿಯಂಘ್ರಿಯ ಕಮಲಯುಗಳದಿ ಚಾಚಿ ದೇಹವನು ॥೫೮॥

ರಾಮಕೀರ್ತನ ರಾಮಸೇವೆಯು ।
ಪ್ರೇಮದಿಂದಲಿ ತೋರಿ ಜನರಿಗೆ ।
ಆ ಮಹಾತ್ಮನು ಮೆರೆದ ಬುವಿಯೊಳು ಸಾಧುವೃಂದದೊಳು ॥
ಪ್ರೇಮಿ ಶುಕಮುನಿ ಕಬಿರನಾಮದಿ ।
ಕಾಮಪೂರಿತ ಜಗದಿ ಜನಿಸುತ ।
ರಾಮವಿಠಲನ ಮಂತ್ರ ಬಿತ್ತಿದ ಪರಮ ಪ್ರೀತಿಯಲಿ ॥೫೯॥

ಗುರುವಿನಿಂದಲಿ ಪಡೆಯಬೇಹುದು ।
ಹರಿಯನಾಮದ ಸುಧೆಯ ಪಾನವ ।
ಗುರುವ ಸೇವಿಸಬೇಕು ಮೋಕ್ಷಕೆ ಮುದದಿ ಜಗದೊಳಗೆ ॥
ಗುರುವ ನಂಬದ ನರನು ಪಾಮರ ।
ಗುರುವ ಪೂಜಿಸದಾತ ನರಕದಿ ।
ನೆರಳಿ ಮರಳುತ ಮೋಕ್ಷಪಡೆಯಲು ತಿಳಿಯದಿರುತಿಹನು ॥೬೦॥

ಸಾಧುಸಂತರ ಕಾಡಲಾಗದು ।
ಸಾಧುಗಳ ಪೂಜಿಸಲುಬೇಹುದು ।
ಸಾಧುಜನವನು ನಿತ್ಯ ವಂದನೆಮಾಡೆ ಸುಖವಹುದು ॥
ಸಾಧುಸೇವೆಯೆ ಸಾಧುಭೋಜನ ।
ಸಾಧುಭಕ್ತರ ಸಂಗತಿಯು ನೆರೆ ।
ಸಾಧುಮಾರ್ಗದಿ ಜಗದಿ ಮುಕ್ತಿಗೆ ಸುಲಭ ಬಟ್ಟೆಯಿದು ॥೬೧॥

ಮಾಯಜಾಲವನೊಡ್ಡಿ ಕುಜನರು ।
ನೋಯಿಸುತ್ತಲಿ ಭಕ್ತಕೂಟವ ।
ನಾಯಕುನ್ನಿಗಳಂತೆ ತೋಷವಪಡಲು ರಘುಪತಿಯು ॥

ಕಾಯುವನು ನೆರೆದಾಗ ಭಕ್ತರ ।
ಮಾಯವೆಲ್ಲವನೆತ್ತಿ ಜಗದೊಳು ।
ಮಾಯಗಾರನು ತೋರಿ ಭಕ್ತರ ಮಹಿಮೆ ಬೆಳಗಿಸುವ ॥೬೨॥

ರಾಮಭಕ್ತ ನನಂತಮುಖದೊಳು ।
ರಾಮವಿಠಲನು ನುಡಿಸಿದನು ಮಿಗೆ ।
ರಾಮಭಕ್ತ ಕಬೀರದಾಸನ ಚರಿತೆಯನು ಮುದದಿ ॥
ರಾಮಭಕ್ತರು ಕೇಳಿ ನಲಿವುದು ।
ರಾಮನಾಮವ ಪಾಡಿ ಕುಣಿವುದು ।
ರಾಮರಸವನು ಪಾನಮಾಡುತ ತೋಷಿಪುದು ಜಗದಿ ॥೬೩॥

ಮಂಗಳಂ ರಘುವಂಶಜಾತಗೆ ।
ಮಂಗಳಂ ಭರತಾದಿ ವಂದ್ಯಗೆ ।
ಮಂಗಳಂ ಕೌಸಲ್ಯತನುಜಗೆ ಪದ್ಮನಾಭನಿಗೆ ॥
ಮಂಗಳಂ ರಾಜೀವನಯನಗೆ ।
ಮಂಗಳಂ ಶ್ರೀರಾಮವಿಠಲಗೆ ।
ಮಂಗಳಂ ಸೀತಾಮನೋಹರ ರಾಮಚಂದ್ರನಿಗೆ ॥೬೪॥

ಮಂಗಳಂ ಸುಕಬೀರದಾಸಗೆ ।
ಮಂಗಳಂ ಸುಕಮಾಲದಾಸಗೆ ।
ಮಂಗಳಂ ಶ್ರೀ ಸಾಧುಸಂತರ ಸರಸಿಜಾಕರಕೆ ॥
ಮಂಗಳಂ ಜಗರಂಜಕಾಂಘ್ರಿಗೆ ।
ಮಂಗಳಂ ಶುಕಮುನಿಗೆ ಭಕ್ತಗೆ ।
ಮಂಗಳಂ ಶ್ರೀರಾಮ ವಿಠಲನ ಚರಣಭಜಕನಿಗೆ ॥೬೫॥

ಸಂಧಿ ೫. ಪದ್ಯ ೩೫೫ ಕ್ಕೆ ಮಂಗಳಮಸ್ತು.

**ಸಂಪೂರ್ಣ.**

ಜಯ ರಘುವೀರ ಸಮರ್ಥ.

